# ಸಾರ್ಥಕ ಬದುಕಿನ ಶತಾಯುಷಿ
# ಪ್ರೊ. ಸೇತುರಾಮ ರಾಘವೇಂದ್ರ ಮಳಗಿ



ಡಾ. ವಿಜಯಾ ಸುಬ್ಬರಾಜ್

'ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ'ವನ್ನು ಕಟ್ಟಿ ಬೆಳೆಸಿದವರಲ್ಲಿ ಪ್ರೊ. ಎಂ.ವಿ. ಸೀತಾರಾಮಯ್ಯನವರು ಮುಖ್ಯರು. ಅವರು ಅದನ್ನು ೦೬ ಮೇ, ೧೯೭೯ರಲ್ಲಿ ಸ್ಥಾಪಿಸಿದರು. ಈ ಪ್ರತಿಷ್ಠಾನವನ್ನು ರಾಷ್ಟ್ರಕವಿ ಕುವೆಂಪು ಅವರು ೧೦ ಮಾರ್ಚ್, ೧೯೮೦ರಂದು ಉದ್ಘಾಟಿಸಿದರು. ಕರ್ನಾಟಕ ಸರ್ಕಾರ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಸಾರ್ವಜನಿಕರ ಸಹಕಾರ, ಸಹಾಯಗಳಿಂದ ಬೆಂಗಳೂರಿನ ನರಸಿಂಹರಾಜ ಕಾಲೋನಿಯಲ್ಲಿ 'ಬಿ.ಎಂ.ಶ್ರೀ. ಕಲಾ ಭವನ' ನಿರ್ಮಾಣವಾಗಿದೆ. ಪ್ರತಿಷ್ಠಾನದ 'ಪ್ರೊ. ಎಂ.ವಿ. ಸೀತಾರಾಮಯ್ಯ ಸಂಶೋಧನಾ ಕೇಂದ್ರ'ದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆಯನ್ನು ಪಡೆದ ಪಿಎಚ್.ಡಿ., ಹಾಗೂ ಎಂ.ಫಿಲ್ ತರಗತಿಗಳು ನಡೆಯುತ್ತಿವೆ. ಪ್ರತಿಷ್ಠಾನ ಅಪರೂಪದ ಹಸ್ತಪ್ರತಿ ಭಂಡಾರವನ್ನು ಹಾಗೂ ಉತ್ತಮ ಗ್ರಂಥಭಂಡಾರವನ್ನು ಹೊಂದಿದೆ. ಹಸ್ತಪ್ರತಿ ವಿಜ್ಞಾನ ಮತ್ತು ಹಳಗನ್ನಡ ಅಧ್ಯಯನ ತರಗತಿಗಳನ್ನು ಪ್ರತಿಷ್ಠಾನ ನಡೆಸುತ್ತಿದೆ; ತ್ರೈಮಾಸಿಕ 'ವಾರ್ತಾಪತ್ರ'ವನ್ನು ಮತ್ತು ದ್ವೈವಾರ್ಷಿಕ ವಿದ್ವತ್ ಪತ್ರಿಕೆ 'ಕರ್ನಾಟಕ ಲೋಚನ'ವನ್ನು ಹಾಗೂ ಕಾಲಕಾಲಕ್ಕೆ ಉತ್ತಮ ಗ್ರಂಥಗಳನ್ನು ಪ್ರಕಟಿಸುತ್ತಿದೆ. ನಿರಂತರವಾಗಿ ಸಂಶೋಧನಾತ್ಮಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಪ್ರತಿಷ್ಠಾನ ನಡೆಸಿಕೊಂಡು ಬರುತ್ತಿದೆ. ೨೦೦೪ರಲ್ಲಿ ಪ್ರತಿಷ್ಠಾನ ರಜತ ಮಹೋತ್ಸವವನ್ನು ಆಚರಿಸಿತು.

# ಸಾರ್ಥಕ ಬದುಕಿನ ಶತಾಯುಷಿ
# ಪ್ರೊ. ಸೇತುರಾಮ ರಾಘವೇಂದ್ರ ಮಳಗಿ

**ಡಾ. ವಿಜಯಾ ಸುಬ್ಬರಾಜ್**



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
3ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು-560019.
ದೂರವಾಣಿ : 26615877, 26676773
ಇಮೇಲ್ : bmsritrust@gmail.com

**SARTHAKA BADUKINA SHATAYUSHI PROF. SEUTHURAMA RAGHAVENDRA MALAGI - by Dr. Vijaya Subbaraj.**

Published by : **B.M.SRI Smaraka Prathisthana,** 3rd main Road, Narasimharaja Colony, Bangalore-560019. 080-26615877

Size 1/8 Demmy

First Impression : 2014

Pages : x + 64

Copies : 500



Price : **Rs. 70/-**

**ಗ್ರಂಥ ಪ್ರಕಟಣಾ ಸಲಹಾ ಸಮಿತಿ**

ಪ್ರೊ. ಎಂ.ಎಚ್. ಕೃಷ್ಣಯ್ಯ (ಗೌರವಾಧ್ಯಕ್ಷರು)

ಡಾ. ಪಿ.ವಿ. ನಾರಾಯಣ (ಅಧ್ಯಕ್ಷರು)

ಪ್ರೊ. ಜಿ. ಅಬ್ದುಲ್ ಬಷೀರ್ (ಗೌರವ ಕಾರ್ಯದರ್ಶಿ)

ಶ್ರೀ ಬಿ.ಆರ್. ರವೀಂದ್ರನಾಥ್ (ಗೌರವ ಕಾರ್ಯದರ್ಶಿ)

ಶ್ರೀ ಎಂ.ಎಸ್. ರಾಮಪ್ರಸಾದ್ (ಕೋಶಾಧಿಕಾರಿ)

ಡಾ. ಕೆ.ಆರ್. ಗಣೇಶ (ಸದಸ್ಯರು)

ಡಾ. ಆರ್. ಲಕ್ಷ್ಮೀನಾರಾಯಣ (ಸದಸ್ಯರು)

ಡಾ. ಎನ್.ಆರ್. ಲಲಿತಾಂಬ (ಸದಸ್ಯರು)

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ಚಾಮರಾಜಪೇಟೆ, ಬೆಂಗಳೂರು-೧೮
✆ ೨೬೬೧ ೩೧೨೩, ೨೬೬೧ ೮೭೫೨

# ಮುಂಮಾತು

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಮೂರು ದಶಕಗಳಿಗೂ ಮೀರಿದ ಅವಧಿಯಿಂದ ಕಾರ್ಯ ನಿರ್ವಹಿಸುತ್ತ ಕನ್ನಡ ಸಾಂಸ್ಕೃತಿಕ ಲೋಕಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡುತ್ತ ಬಂದ ಸಂಸ್ಥೆ. ಇದರ ಬಗ್ಗೆ ನಾಡಿನ ಎಲ್ಲ ವಿದ್ವಾಂಸರೂ ಆದರಾಭಿಮಾನಗಳನ್ನು ಹೊಂದಿ ಸಂಸ್ಥೆಯೊಂದಿಗೆ ಸಹಕರಿಸುತ್ತಿದ್ದಾರೆ. ತಮ್ಮ ಹೊಚ್ಚ ಹೊಸ ಕೃತಿಗಳನ್ನು ಪ್ರಕಟಿಸಲು ನಮಗೆ ಅನುವು ಮಾಡಿಕೊಡುತ್ತಿದ್ದಾರೆ; ಹಾಗಾಗಿಯೇ ಅದರ ಪ್ರಕಟಣ ಕಾರ್ಯವೂ ಯಶಸ್ವಿಯಾಗಿ ನಡೆದುಕೊಂಡು ಬರುತ್ತಿದೆ.

ಪ್ರತಿಷ್ಠಾನದ ಮೂಲ ನೆಲೆ ಸಂಶೋಧನೆ. ಸಂಶೋಧನೆಯೆಂಬುದು ಹಿಂದಿನದನ್ನು ಕೆದಕುವುದಕ್ಕೆ ಮಾತ್ರ ಸೀಮಿತವಾದದ್ದೇನಲ್ಲ. ಎಲ್ಲ ಕಾಲದ ಸಂದರ್ಭ, ಸನ್ನಿವೇಶ, ಕೃತಿ, ಕಾರ್ಯ ಇವುಗಳಲ್ಲಿ ಅಂತರ್ಗತವಾದ ಸತ್ಯವನ್ನು ಗುರುತಿಸುವ ಕೆಲಸವೇ ಸಂಶೋಧನೆಯೆನ್ನಬಹುದೆಂದು ನನ್ನ ತಿಳಿವಳಿಕೆ. ಹಾಗಾಗಿ ಸಮಕಾಲೀನವಾದದ್ದರ ಬಗ್ಗೆಯೂ ಶಾಶ್ವತದ ಜೊತೆಗೆ ಸದ್ಯದ ಬಗ್ಗೆಯೂ ಸಂಶೋಧನೆ ನಡೆಯಬೇಕಾದುದು, ಆವಶ್ಯಕ. ಸಂಶೋಧನೆಯ ಅರ್ಥ ಹುಡುಕಾಟ ಎಂದಲ್ಲವೇ? ಆಗಲೇ ಹೇಳಿದಂತೆ 'ಸತ್ಯ'ವನ್ನು ಶೋಧಿಸುವುದು. ಆದರೆ ಸತ್ಯ ಎಂದರೇನೆಂಬುದನ್ನೇ ಯಾರೂ ಖಚಿತವಾಗಿ ನಿರ್ವಚಿಸಲಾಗುವುದಿಲ್ಲ! ಒಂದು ಕಾಲಕ್ಕೆ ಸತ್ಯ ಎನ್ನಿಸಿಕೊಳ್ಳುವಂಥದು ಮತ್ತೊಂದು ಕಾಲಕ್ಕೆ ಹಾಗೆ ಕಾಣದೇ ಹೋಗಬಹುದು; ಅಥವಾ ಒಬ್ಬ ವ್ಯಕ್ತಿಗೆ ಸತ್ಯವೆನಿಸಿದ್ದು ಮತ್ತೊಬ್ಬನಿಗೆ ಹಾಗನ್ನಿಸದೇ ಇರಬಹುದು; ಅಷ್ಟೇಕೆ? ಒಬ್ಬನೇ ವ್ಯಕ್ತಿಗೆ ಒಮ್ಮೆ ಸತ್ಯವೆನ್ನಿಸಿದುದು ಕಾಲ ಸರಿದಂತೆ ತನ್ನ ಅನಿಸಿಕೆಯ ಬಗ್ಗೆ ಅವನಿಗೆ ಅನುಮಾನವುಂಟಾಗಬಹುದು. ಅಂದರೆ ಸತ್ಯ ಎಂಬುದು ಅನಂತಮುಖಿ; ಅದಕ್ಕನುಗುಣವಾಗಿ ಸಂಶೋಧನೆಯೂ. ಹಳೆಯದನ್ನು ಹಾಗೂ ಹೊಸದನ್ನು ಹೊಸದೃಷ್ಟಿಯಿಂದ ನೋಡುವ, ವಿಶ್ಲೇಷಿಸುವ, ಪರಿಭಾವಿಸುವ, ವ್ಯಾಖ್ಯಾನಿಸುವ, ಅದರ ಪ್ರಸ್ತುತತೆಯನ್ನು ವಿವೇಚಿಸುವ ಎಲ್ಲ ಬೌದ್ಧಿಕ ಸಾಹಸಗಳೂ ಸಂಶೋಧನೆಗಳೇ.

ಇಂತಹ ಸಂಶೋಧನೆ ಹೆಚ್ಚಾಗಬೇಕು. ಅರಿಯುವ, ಬಗೆಯುವ ಪ್ರಕ್ರಿಯೆ ಮೊನಚಾಗಬೇಕು, ಆಳವಾಗಬೇಕು. ಅದಕ್ಕಾಗಿ ಹಿರಿಯರ ಮಾರ್ಗದರ್ಶನ ಬೇಕು, ಕಿರಿಯರ ಉತ್ಸಾಹ ಬೇಕು. ಪ್ರತಿಷ್ಠಾನವು ತಾನು ಆರಂಭಗೊಂಡ ಕಾಲದಿಂದ ಮೊದಲುಗೊಂಡು ಇಂತಹ ಕಾರ್ಯಗಳಿಗೆ ವೇದಿಕೆಯಾಗಿದೆ; ಉಪನ್ಯಾಸಗಳು, ವಿಚಾರ ಸಂಕಿರಣಗಳು, ಸಂವಾದಗಳು ಇವುಗಳ ಜೊತೆಗೆ ಎಂ.ಫಿಲ್ ಮತ್ತು ಪಿಎಚ್.ಡಿ ಅಭ್ಯರ್ಥಿಗಳಿಗೆ ತರಬೇತಿ ಮತ್ತು ಮಾರ್ಗದರ್ಶನಗಳು, ಪುಸ್ತಕ ಪ್ರಕಟಣೆ ಇವುಗಳ

ಮೂಲಕ ಇಂಥ ಸಂಶೋಧನೆಗೆ ಪ್ರತಿಷ್ಠಾನವು ವೇದಿಕೆಯಾಗಿದೆ. ಈ ಕಾರ್ಯದಲ್ಲಿ ಎಲ್ಲರ ನೆರವು ಮತ್ತು ಪ್ರೋತ್ಸಾಹಗಳು ಆವಶ್ಯಕ.

ಡಾ. ವಿಜಯಾ ಸುಬ್ಬರಾಜ್ ಅವರ 'ಸಾರ್ಥಕ ಬದುಕಿನ ಶತಾಯುಷಿ ಪ್ರೊ. ಸೇತುರಾಮ ರಾಘವೇಂದ್ರ ಮಳಗಿ' ಒಂದು ಅಪರೂಪದ ಕೃತಿ. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪ್ರೊ. ಮಳಗಿಯವರ ವಿದ್ಯಾರ್ಥಿನಿಯಾಗಿದ್ದ ಡಾ. ವಿಜಯಾ ಸುಬ್ಬರಾಜ್ ಅವರು ಪ್ರೊ. ಮಳಗಿಯವರನ್ನು ಹತ್ತಿರದಿಂದ ಕಂಡವರು. ಹೀಗಾಗಿ ತುಂಬ ಅಭಿಮಾನದಿಂದ ಹೆಚ್ಚು ಶ್ರಮವಹಿಸಿ ಅನೇಕ ಕಡೆಗಳಿಂದ ವಿವರಗಳನ್ನು ಸಂಗ್ರಹಿಸಿ ಈ ಕೃತಿಯನ್ನು ರಚಿಸಿದ್ದಾರೆ. ಪ್ರೊ. ಮಳಗಿಯವರು ಸಾಹಿತ್ಯ ರಚನೆಗಿಂತ ಹೆಚ್ಚಾಗಿ ಅಧ್ಯಾಪಕ ವೃತ್ತಿಯಲ್ಲಿ ಹಾಗೂ ಆ ಬಗೆಯ ಕಾರ್ಯಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದ್ದರು ಹಾಗೂ ತಮ್ಮನ್ನು ತೊಡಗಿಸಿಕೊಂಡಿದ್ದರು ಎಂಬುದನ್ನು ಲೇಖಕರು ತುಂಬ ಸುಂದರವಾಗಿ ನಿರೂಪಿಸಿದ್ದಾರೆ. ವಿದ್ಯಾರ್ಥಿಗಳಿಗಾಗಿ ಪಠ್ಯ ಪುಸ್ತಕಗಳನ್ನು ನಿರ್ಮಾಣ ಮಾಡಿದ್ದರ ಜೊತೆಗೆ ಅನೇಕ ಮೌಲಿಕವೂ ಅಪರೂಪದವೂ ಆದ ಕೃತಿಗಳನ್ನು ಪ್ರೊ. ಮಳಗಿಯವರು ರಚಿಸಿದ್ದಾರೆ. ಆದರೆ ಅವರು ಹೆಚ್ಚಿಗೆ ಬೆಳಕಿಗೆ ಬರಲಿಲ್ಲವೆಂಬುದನ್ನು ಲೇಖಕರು ತಿಳಿಸಿದ್ದಾರೆ.

ಅಪರೂಪದ ಕನ್ನಡ ಪ್ರಾಧ್ಯಾಪಕರೂ ಸಾಹಿತಿಗಳೂ ಆಗಿದ್ದ ಪ್ರೊ. ಎಸ್.ಆರ್. ಮಳಗಿಯವರನ್ನು ಕುರಿತು ಗ್ರಂಥವನ್ನು ರಚಿಸಿಕೊಟ್ಟ ಡಾ. ವಿಜಯಾ ಸುಬ್ಬರಾಜ್ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಕೃತಿಯ ಕರಡನ್ನು ತಿದ್ದಿ ಕೃತಿ ಸುಂದರವಾಗಿ ಹಾಗೂ ಶೀಘ್ರವಾಗಿ ಹೊರಬರಲು ಕಾರಣರಾದ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಗಳಾದ ಪ್ರೊ. ಜಿ. ಅಬ್ದುಲ್ ಬಷೀರ್ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಈ ಕೃತಿಯನ್ನು ಸುಂದರವಾಗಿ ಹಾಗೂ ಶೀಘ್ರವಾಗಿ ಮುದ್ರಿಸಿಕೊಟ್ಟ ಲಕ್ಷ್ಮೀ ಮುದ್ರಣಾಲಯದ ಮಾಲೀಕರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

**ಡಾ॥ ಪಿ.ವಿ. ನಾರಾಯಣ**
ಅಧ್ಯಕ್ಷರು
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

# ಲೇಖಕರ ನುಡಿ

೧೯೬೮-೬೯ರಲ್ಲಿ ವಿದ್ಯಾರ್ಥಿನಿಯಾಗಿದ್ದಾಗ ಪ್ರೊ. ಎಸ್.ಆರ್. ಮಳಗಿ ನಮಗೆ ಎಂ.ಎ ತರಗತಿಗೆ ಛಂದಸ್ಸಿನ ಪಾಠವನ್ನು ಮಾಡುತ್ತಿದ್ದರು. ಛಂದಸ್ಸಿನ ಪಾಠಗಳನ್ನು ಹೇಳುವಾಗ ಉದಾಹರಣೆಯಾಗಿ ಹೇಳುತ್ತಿದ್ದ ಕನ್ನಡ ಪ್ರಾಚೀನ, ಆಧುನಿಕ ಕಾವ್ಯದ ಸಾಲುಗಳನ್ನು ತಮ್ಮ ಕಂಚು ಕಂಠದಿಂದ ಹೇಳುತ್ತಿದ್ದುದನ್ನು ಇವತ್ತಿಗೂ ನನಗೆ ಮರೆಯಲು ಸಾಧ್ಯವಿಲ್ಲ. ಎಂ.ಎ ನಂತರ ನಲ್ವತ್ತು ವರ್ಷಗಳ ಅವಧಿಯಲ್ಲಿ ಎರಡು ಮೂರು ಬಾರಿ ಕಂಡಿದ್ದರೆ ಹೆಚ್ಚು, ಕಾಣದಿದ್ದರೂ ನೆನಪುಗಳಂತೂ ಸಾಯುವುದಿಲ್ಲವಲ್ಲ ! ಇಂಥ ಸಮಯದಲ್ಲಿ ದಿಢೀರನೆ ವಿ.ಸೀ. ಸಂಪದದ ಶ್ರೀ ವೆಂಕಟೇಶಮೂರ್ತಿ ಅವರು ಫೋನಿಸಿ, ಹಿರಿಯ ಚೇತನಗಳಿಗೆ ಗೌರವ ಸಲ್ಲಿಸುವ ಉದ್ದೇಶದಿಂದ ಒಂದು ಕೃತಿ ತರುತ್ತಿರುವುದಾಗಿಯೂ ಪ್ರೊ. ಮಳಗಿ, ನೂರ ಮೂರರ ವಸಂತದಲ್ಲಿರುವ ಮೇಷ್ಟುಗಳ ಮೇಷ್ಟ್ರು ಎಂದು ಗುರುತಿಸಿಕೊಂಡಿರುವ ಅವರ ಶಿಷ್ಯೆಯಾಗಿದ್ದ ಕಾರಣ ಅವರ ಬದುಕು ಬರಹಕ್ಕೆ ಲೇಖನ ಬರೆಯಲು ಕೇಳಿಕೊಂಡರು. ನನಗೆ ಅವರ ಬದುಕಿನ ವಿವರಗಳು ಅಷ್ಟಾಗಿ ಗೊತ್ತಿರಲಿಲ್ಲ. ಒಂದೆರಡು ವರ್ಷ ಮೇಷ್ಟ್ರಾಗಿ ಇದ್ದದ್ದು ಬಿಟ್ಟರೆ ಬೇರೇನೂ ಗೊತ್ತಿರಲಿಲ್ಲ. ಹಾಗಾಗಿ ಲೇಖನ ಬರೆಯಲು ನನ್ನ ಅಸಮರ್ಥತೆ ತೋಡಿಕೊಂಡೆ. ಆದರೂ ಮೂರ್ತಿಯವರು ತಮ್ಮಲ್ಲಿರುವ ಲೇಖನವೊಂದನ್ನು, ಜೊತೆಗೆ ಅವರನ್ನು ಖುದ್ದಾಗಿ ಕಾಣಲು ಅವಕಾಶವನ್ನು ಕಲ್ಪಿಸಿಕೊಡುವುದಾಗಿ ಹೇಳಿದಾಗ, ಅವರ ಪ್ರೀತಿಯ ಒತ್ತಾಯವನ್ನು ನಿರಾಕರಿಸಲು ಸಾಧ್ಯವಾಗದೆ ಅವರಿಂದ ಪ್ರೊ. ಮಳಗಿ ಅವರ ಮೊಮ್ಮಗನ ದೂರವಾಣಿ ನಂಬರ್ ತೆಗೆದುಕೊಂಡು, ಒಂದೆರಡು ದಿನಗಳ ನಂತರ ಫೋನಿಸಿ ದೊಡ್ಡಲಕ್ಕುಂಡಿಯಲ್ಲಿನ ಆಚೆ ಬಹಳ ದೂರದ ಅವರ ಮನೆಗೆ ಮಟ ಮಟ ಮಧ್ಯಾಹ್ನ ತಲುಪಿದೆ. ಮನೆ ಹುಡುಕಾಟ ಸ್ವಲ್ಪ ಕಷ್ಟವಾದರೂ, ಯಶಸ್ವಿಯಾದೆ. ಅವರ ಸೊಸೆ ಮತ್ತು ಮನೆಯವರೂ ಪ್ರೀತಿ ವಿಶ್ವಾಸದಿಂದ ಬರಮಾಡಿಕೊಂಡರು. ನನ್ನ ಪರಿಚಯ ಹೇಳಿ, ಬಂದ ಉದ್ದೇಶ ತಿಳಿಸಿದೆ. ಅವರೂ ಖುಷಿಪಟ್ಟರು. ಊಟದ ಸಮಯವಾಗಿತ್ತು. ಪ್ರೊ. ಮಳಗಿಯವರು ಊಟ ಮಾಡುತ್ತಿದ್ದರು; ಅವರ ಜೊತೆ ನನಗೂ ಊಟಕ್ಕೆ ಒತ್ತಾಯ. ಊಟ ಮಾಡುತ್ತಲೇ ಪ್ರೊ. ಮಳಗಿಯವರನ್ನು ಮಾತಾಡಿಸಿದೆ. ಮಾತು ಸ್ಪಷ್ಟವಾಗಿ ಅಸ್ಖಲಿತವಾಗಿತ್ತು. ಆದರೆ ಆ ಕ್ಷಣ ಹೇಳಿದ್ದನ್ನು ಕೇಳಿದ್ದನ್ನು ಸ್ವಲ್ಪ ಮರೆತು ಬಿಡುತ್ತಿದ್ದರು. ಬಿಸಿ ಬಿಸಿ ಊಟದ ನಂತರ ತಣ್ಣನೆಯ ಫ್ಯಾನ್ ಕೆಳಗೆ ಮಾತುಕತೆ ! ಅವರೊಂದಿಗಿಂತ ಅವರ ಸೊಸೆಯಿಂದ ವಿವರಗಳನ್ನು ಪಡೆದೆ. ಪೂರಕವಾಗಿ ಕೆಲವೇ ಕೆಲವು ಪುಸ್ತಕಗಳು ಮಾತ್ರವೇ ಲಭ್ಯವಿದ್ದು ಅದನ್ನು ನನಗೆ ನೀಡಿ ತುಂಬಾ ಸಹಕರಿಸಿದರು. ಅವರಿಂದ ಸಿಕ್ಕಷ್ಟೇ ವಿವರಗಳು ಲೇಖನಕ್ಕೆ ಸಾಕಾಗುತ್ತಿರಲಿಲ್ಲ. ಚೆನ್ನವೀರ ಕಣವಿಯವರಿಗೆ

ಮೇಷ್ಟ್ರಾಗಿದ್ದ ವಿಷಯ ತಿಳಿದುಬಂತು. ಅದನ್ನೂ ನೆನಪಿನಲ್ಲಿಟ್ಟುಕೊಂಡು ಒಂದಷ್ಟು ವಿವರಗಳೊಂದಿಗೆ ಪುಸ್ತಕಗಳೊಂದಿಗೆ ಹಿಂತಿರುಗಿದೆ. ಬಂದ ಮೇಲೆ ಕಣವಿ ಅವರಿಗೆ ಫೋನ್ ಮಾಡಿ ಅವರ ಬಗ್ಗೆ ಕೆಲವು ಮಾಹಿತಿಗಳನ್ನು, ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗಿನ ಅವರ ಸಾಂಸ್ಕೃತಿಕ ಚಟುವಟಿಕೆಗಳನ್ನು ವಿದ್ಯಾರ್ಥಿಯಾಗಿದ್ದಾಗ ತಮ್ಮ ಕಾವ್ಯಪ್ರತಿಭೆ ಮೆಚ್ಚಿ ಬೆನ್ನು ತಟ್ಟಿದ್ದನ್ನು ಮತ್ತು ಇನ್ನೂ ಅನೇಕ ನೆನಪುಗಳ ವಿವರಗಳನ್ನು ಪಡೆದೆ. ಡಾ. ಎಸ್. ವಿದ್ಯಾಶಂಕರ್ ಅವರೂ ನನಗೆ ಕೆಲವು ಮಾಹಿತಿಗಳನ್ನು ನೀಡಿದರು. ಹೀಗಾಗಿ ಅವರಿವರಿಂದ, ಜೋಶಿಯವರು ತಮ್ಮ ಗೆಳೆಯರ ಬಗ್ಗೆ ಬರೆದ ಲೇಖನದಿಂದಲೂ ಪತ್ರಿಕೆಯ ಚ.ಹ. ರಘುನಾಥ ಅವರು ನೂರು ತುಂಬಿದಾಗ ಪ್ರಜಾವಾಣಿಯಲ್ಲಿ ಬರೆದ ಲೇಖನದಿಂದಲೂ ವಿವರಗಳನ್ನು ಪಡೆದು ಜೊತೆಗೆ ಲಭ್ಯವಿದ್ದ ಅವರ ಕೃತಿಗಳ ಸೀಮಿತ ಅಧ್ಯಯನದ ಮೂಲಕ ಅವರ ಬರಹ ಕುರಿತಾದ ಸೂಕ್ಷ್ಮ ನೋಟಗಳನ್ನು ಕೊಡಲು ಪ್ರಯತ್ನಿಸಿದ್ದೇನೆ. ಮೇಷ್ಟ್ರಾಗಿ, ಅರವಿಂದರ ಅನನ್ಯ ಅನುಯಾಯಿಯಾಗಿ ಸಾರ್ಥಕ ಬದುಕನ್ನು ಬದುಕಿ ನೂರ ಮೂರು ವರ್ಷ ತುಂಬಿ ನೂರ ನಾಲ್ಕಕ್ಕೆ ಕಾಲಿಟ್ಟಾಗ, ಜನವರಿ ಡಿಸೆಂಬರ್ ೨೩, ೨೦೧೪ರಂದು ಅಂತಿಮ ಪಯಣದತ್ತ ಸಾಗಿದರು. ಅದಕ್ಕೆ ಮುಂಚೆಯೇ ಎಷ್ಟೋ ವರ್ಷಗಳ ನಂತರ ಅವರನ್ನು ಕಾಣುವ, ಕಂಡು ಮಾತಾಡುವ, ಮಾತಾಡಿ ಅವರ ಬಗ್ಗೆ ಬರೆಯುವ ಸದವಕಾಶ ಸಿಕ್ಕಿದ್ದು ನನ್ನಲ್ಲಿ ಒಂದು ಸಾರ್ಥಕತೆಯ ಭಾವ ಮೂಡಿಸಿದೆ.

ಪ್ರೊ. ಮಳಗಿಯವರನ್ನು ಕುರಿತು ಕೃತಿ ರಚನೆಗೆ ಅವಕಾಶ ಮಾಡಿಕೊಟ್ಟ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಗೌರವಾಧ್ಯಕ್ಷರಾದ ಪ್ರೊ. ಎಂ.ಎಚ್. ಕೃಷ್ಣಯ್ಯನವರಿಗೂ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರಿಗೂ ಮಾಜಿ ಗೌರವ ಕಾರ್ಯದರ್ಶಿಗಳಾದ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರಿಗೂ ಈಗಿನ ಗೌರವ ಕಾರ್ಯದರ್ಶಿಗಳಾದ ಪ್ರೊ. ಜಿ. ಅಬ್ದುಲ್ ಬಷೀರ್ ಮತ್ತು ಶ್ರೀ ಬಿ.ಆರ್. ರವೀಂದ್ರನಾಥ್ ಅವರಿಗೂ ಕೋಶಾಧಿಕಾರಿಗಳಾದ ಪ್ರೊ. ಎಂ.ಎಸ್. ರಾಮಪ್ರಸಾದ್ ಅವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಈ ಕೃತಿಯನ್ನು ಸುಂದರವಾಗಿ, ಶೀಘ್ರವಾಗಿ ಮುದ್ರಿಸಿಕೊಟ್ಟ ಲಕ್ಷ್ಮೀ ಮುದ್ರಣಾಲಯದ ಮಾಲೀಕರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

**–ಡಾ. ವಿಜಯಾ ಸುಬ್ಬರಾಜ್**

# ಪರಿವಿಡಿ

# ಸಾರ್ಥಕ ಬದುಕಿನ ಶತಾಯುಷಿ
# ಪ್ರೊ. ಸೇತುರಾಮ ರಾಘವೇಂದ್ರ ಮಳಗಿ

## ೧. ಜೀವನ-ವೃತ್ತಿ

**ಶ**ತಾಯುಷ್ಯಕ್ಕೇ ಸೆಡ್ಡು ಹೊಡೆದು, ಮಾನಸಿಕ ದೈಹಿಕ ಸ್ವಾಸ್ಥ್ಯವನ್ನು ಸಂರಕ್ಷಿಸಿಕೊಂಡು, ಚಟುವಟಿಕೆಯಿಂದ ಸ್ವಾವಲಂಬಿಗಳಾಗಿ ಓಡಾಡಿಕೊಂಡು ಬದುಕಿದ್ದ ಹಿರಿಯ ಚೇತನಗಳಲ್ಲಿ ಪ್ರೊ. ಎಸ್.ಆರ್. ಮಳಗಿಯವರೂ ಒಬ್ಬರು. ನೂರ ಎರಡು ವಸಂತಗಳನ್ನು ಕಳೆದು ನೂರ ಮೂರನೇ ವಸಂತಕ್ಕೆ ಕಾಲಿರಿಸಿರುವ ನಮ್ಮ ಮೇಷ್ಟ್ರು ಮಳಗಿಯವರು ಮೂವತ್ತರ ದಶಕದಿಂದ ಎಂಬತ್ತರ ದಶಕದವರೆಗೆ ಹೈಸ್ಕೂಲು, ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ಎಲ್ಲ ಶೈಕ್ಷಣಿಕ ಹಂತಗಳಲ್ಲಿ ಮೇಷ್ಟ್ರಾಗಿ, ಮಹಾಮೇಷ್ಟ್ರಾಗಿ, ಮತ್ತು ಚ.ಹ. ರಘುನಾಥರು ಹೇಳಿದಂತೆ, ಮೇಷ್ಟ್ರುಗಳ ಮೇಷ್ಟ್ರಾಗಿ ಕೆಲಸ ಮಾಡಿ ಸಾರ್ಥಕ ಬದುಕನ್ನು ಬುದಕಿದವರು. ತಮ್ಮ ವಿದ್ಯಾರ್ಥಿಗಳಾಗಿದ್ದ ಎಷ್ಟೋ ಮಂದಿಯನ್ನು ಯೋಗ್ಯ ಮೇಷ್ಟ್ರುಗಳಾಗಲು, ಒಳ್ಳೆಯ ವಿದ್ವಾಂಸರೂ ಸಾಹಿತಿಗಳೂ ಆಗಲು ಪ್ರೇರಣೆ ಪ್ರೋತ್ಸಾಹ ನೀಡಿದವರು. ಮೊದಲಿನಿಂದಲೂ ಅಧ್ಯಾಪಕ ವಿದ್ವಾಂಸರೊಂದಿಗೆ ನಾಡಿನ ಗಣ್ಯಾತಿಗಣ್ಯ, ಶ್ರೇಷ್ಠ ಹಿರಿಯ ಸಾಹಿತಿಗಳ, ರಂಗ ಕಲಾವಿದರ ಸಂಪರ್ಕದಲ್ಲಿದ್ದವರು, ಒಡನಾಟ ಇರಿಸಿಕೊಂಡಿದ್ದವರು.

ನಿವೃತ್ತಿಯ ನಂತರ ಅಷ್ಟಾಗಿ ಸಾರ್ವಜನಿಕವಾಗಿ ಮೇಲಿಂದ ಮೇಲೆ ಕಾಣಿಸಿಕೊಳ್ಳದಿದ್ದರೂ ತಮ್ಮ ಪಾಡಿಗೆ ತಾವು ಎಲೆ ಮರೆಯ ಕಾಯಂತೆ ಸದ್ದುಗದ್ದಲವಿಲ್ಲದೆ ಸೃಜನಶೀಲ ಪ್ರಕ್ರಿಯೆಯಲ್ಲಿಯೋ ಗಂಭೀರವಾಗಿ ಶಾಸ್ತ್ರ ಗ್ರಂಥಗಳ ಅಧ್ಯಯನದಲ್ಲಿಯೋ ತೊಡಗಿಸಿಕೊಂಡು, ಮಕ್ಕಳು ಮೊಮ್ಮಕ್ಕಳೊಂದಿಗೆ ಸುಖಿ ಮತ್ತು ಸಂತೃಪ್ತ ಜೀವನ ನಡೆಸುತ್ತಾ ಬಂದವರು ಅವರು. ಅವರನ್ನು ಸಾರಸ್ವತ ಜಗತ್ತು ಅಷ್ಟಾಗಿ ಗಮನಕ್ಕೆ ತೆಗೆದುಕೊಳ್ಳದಿದ್ದರೂ ಅವರ ಶಿಷ್ಯತ್ವದ ದೀಕ್ಷೆಯಲ್ಲಿ ಇದ್ದವರ ಹೆಸರುಗಳನ್ನು ನೆನಪಿಸಿಕೊಡರೆ ದಂಗು ಬಡಿದಂತಾಗುತ್ತದೆ. ಆ ಶಿಷ್ಯರ ಪಟ್ಟಿಯಲ್ಲಿ ಹೆಸರಾಂತ ಕವಿಗಳು, ವಿಮರ್ಶಕರು, ಚಿಂತಕರು, ನಾಟಕಕಾರರು, ಕನ್ನಡ ಪರ ಹೋರಾಟಗಾರರು, ಮೊದಲಾದವರು ಇದ್ದಾರೆ. ಕೆಲವರನ್ನು ಹೆಸರಿಸುವುದಾದರೆ, ಗಿರೀಶ್ ಕಾರ್ನಾಡ್, ಕಿ.ರಂ. ನಾಗರಾಜ, ಚಂದ್ರಶೇಖರ ಪಾಟೀಲ, ಚೆನ್ನವೀರ ಕಣವಿ, ಚಿ. ಶ್ರೀನಿವಾಸರಾಜು, ಡಾ. ವೀರಣ್ಣ, ಡಾ. ವಿಜಯಾ ಸುಬ್ಬರಾಜ್, ಡಾ ಸಿದ್ಧಲಿಂಗ ಪಟ್ಟಣಶೆಟ್ಟಿ, ಡಾ. ಎಚ್.ಎಸ್. ರಾಘವೇಂದ್ರರಾವ್, ಪಾಟೀಲ ಪುಟ್ಟಪ್ಪ, ಡಾ. ಗಿರಡ್ಡಿ ಗೋವಿಂದರಾಜು,

ಸು.ರಂ. ಎಕ್ಕುಂಡಿ, ಡಾ. ಜಿ.ಎಸ್. ಆಮೂರ, ಡಾ ಬರಗೂರು ರಾಮಚಂದ್ರಪ್ಪ, ಪ್ರೊ ಜಿ. ಅಬ್ದುಲ್ ಬಷೀರ್ ಮುಂತಾದವರು ಕನ್ನಡ ಸಾಹಿತ್ಯ ಲೋಕದಲ್ಲಿ ಚಿರಪರಿತರಾದವರೇ ಆಗಿದ್ದಾರೆ. ಈ ಸಂದರ್ಭದಲ್ಲಿ ಚ.ಹ. ರಘುನಾಥರು ಮೇಷ್ಟ್ರುಗಳನ್ನು ಕುರಿತು ಆಡಿದ ಕೆಲವು ಮಾತುಗಳನ್ನು ಸ್ಮರಿಸಿಕೊಂಡಾಗ, ಮೇಷ್ಟ್ರು ಮಳಗಿಯವರ ನೆಲೆ ಏನೆಂಬುದು ಸ್ಪಷ್ಟವಾಗುತ್ತದೆ. "ಪಾಠ ಹೇಳುವ ಮೂಲಕ ನಾಡು-ನುಡಿಯ ಏಳಿಗೆಗೆ ಪಾಲು ಸಲ್ಲಿಸಿದ, ಆ ಮೂಲಕ ಜನಮನಸದಲ್ಲಿ ನೆಲೆನಿಂತ ಕನ್ನಡ ಮೇಷ್ಟ್ರುಗಳ ಒಂದಷ್ಟು ಹೆಸರಗಳನ್ನು ನೆನಪಿಸಿಕೊಳ್ಳಿ; ಹಳೆ ತಲೆಮಾರಿನ ಟಿ.ಎಸ್. ವೆಂಕಣ್ಣಯ್ಯ, ಎ.ಆರ್. ಕೃಷ್ಣಶಾಸ್ತ್ರಿ, ಬಿ.ಎಂ. ಶ್ರೀಕಂಠಯ್ಯ, ಜಿ.ಪಿ. ರಾಜರತ್ನಂ, ಜಿ.ಎಸ್. ಶಿವರುದ್ರಪ್ಪ, ಹಂ.ಪ. ನಾಗರಾಜಯ್ಯ, ಚಿ. ಶ್ರೀನಿವಾಸರಾಜು, ಕಿ.ರಂ. ನಾಗರಾಜ, ಎಚ್.ಎಸ್. ವೆಂಕಟೇಶಮೂರ್ತಿ" ಮೊದಲಾಗಿ ಇನ್ನೂ ಹಲವು ಮೇಷ್ಟ್ರುಗಳಿದ್ದು, ಆ ಮೇಷ್ಟ್ರುಗಳ ಪರಂಪರೆ ಮುಂದುವರೆದು ಅವರಲ್ಲಿ (ಮೇಲೆ ಪ್ರಸ್ತಾಪಿಸಿದ ಹೆಸರುಗಳಲ್ಲದೆ) ಇನ್ನೂ ಹಲವಾರು ಹೆಸರುಗಳು ಇಂದಿಗೂ ಸ್ಮರಣೀಯವಾಗಿ ನಿಲ್ಲುತ್ತವೆ. ಕಾರಣ ಅವರೆಲ್ಲ ಮೇಷ್ಟ್ರು ಕೆಲಸಕ್ಕಷ್ಟೇ ಸೀಮಿತವಾಗಿದೆ ಸಾಹಿತ್ಯಲೋಕಕ್ಕೂ ಚಾಚಿಕೊಂಡವರಾಗಿದ್ದಾರೆ. ಕನ್ನಡದ ಸೃಜನಶೀಲ ಸಾಹಿತ್ಯ, ಶಾಸ್ತ್ರ ಸಾಹಿತ್ಯ ಮತ್ತು ಕನ್ನಡ ಭಾಷೆ, ಸಂಸ್ಕೃತಿಗಳ ಏಳಿಗೆಗಾಗಿ ದುಡಿದು ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ ; ಈಗಲೂ ನೀಡುತ್ತಾ ಬಂದಿದ್ದಾರೆ ; ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಆದರೆ ಮಳಗಿಯವರು ಮೇಷ್ಟ್ರ ಕೆಲಸವನ್ನು ಒಂದು ತಪಸ್ಸಿನಂತೆ ಭಾವಿಸಿ, ಅದಕ್ಕೇ ತಮ್ಮನ್ನು ಹೆಚ್ಚಾಗಿ ಬದ್ಧವಾಗಿಸಿಕೊಂಡು, ಬರವಣಿಗೆಗೆ ಯಾಕೋ ಅಷ್ಟೊಂದು ಗಮನ ಹರಿಸಲಿಲ್ಲ. ಆಡುವ ಪಾಠ ವಿದ್ಯಾರ್ಥಿಗಳಿಗೆ ಮನಮುಟ್ಟುವಂತೆ, ಸರಿಯಾದ ಅರ್ಥಗ್ರಹಿಕೆಗೆ ಸಾಧ್ಯವಾಗುವಂತೆ ಸರಳ ರೀತಿಯಲ್ಲಿ ಬೋಧಿಸುವುದು, ಯಾವುದೇ ಕ್ಲಿಷ್ಟವಾದ ಪಠ್ಯಕ್ಕೆ ಅದ್ಭುತವಾದ ರೀತಿಯಲ್ಲಿ ಮನವರಿಕೆಯಾಗುವಂತೆ ನೋಟ್ಸ್ ಸಿದ್ಧಪಡಿಸುವುದನ್ನೇ ತಮ್ಮ ಮಹತ್ವದ ಕಾಯಕವಾಗಿ ಅವರು ಭಾವಿಸಿದಂತೆ ಕಾಣುತ್ತದೆ. ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗಕ್ಕೆ ಪ್ರೊಫೆಸರಾಗಿ ಬಂದ ಮಳಗಿಯವರ ಈ ಸಾಮರ್ಥ್ಯ ಕುರಿತು ಅವರ ಸಹೋದ್ಯೋಗಿಗಳಾಗಿದ್ದ ಡಾ. ವಿದ್ಯಾಶಂಕರ್ ತಮ್ಮ ನೆನಪನ್ನು ಹೀಗೆ ಬಿಚ್ಚಿಡುತ್ತಾರೆ: "ಮಳಗಿಯವರದು ಬಹಳ ಸೌಮ್ಯ ವ್ಯಕ್ತಿತ್ವ. ಅವರ ಆತ್ಮೀಯತೆ, ಪ್ರೀತಿ ಖುದ್ದಾಗಿ ಅನುಭವಿಸಿದವರಿಗೇ ಗೊತ್ತು ಅದು ಎಷ್ಟು ಮಧುರ ಎಂಬುದು. ಅವರು ಶಬ್ದಮಣಿದರ್ಪಣ, ಛಂದಸ್ಸು ಪಾಠ ಮಾಡುತ್ತಿದ್ದ ರೀತಿ ಅನನ್ಯ. ಬೆಂಗಳೂರು ವಿಶ್ವವಿದ್ಯಾನಿಲಯದ ದೂರ ಶಿಕ್ಷಣ ವಿದ್ಯಾರ್ಥಿಗಳಿಗೆಂದು ಅವರು ಗ್ರಂಥ ಸಂಪಾದನೆ ಬಗ್ಗೆ ಬರೆದ ನೋಟ್ಸ್ ಮತ್ತು ಅವರು ಸಂಪಾದಿಸಿದ 'ಶಬ್ದಮಣಿದರ್ಪಣ ಸಂಗ್ರಹ' ಇವತ್ತಿಗೂ ಕೂಡಾ ನೆನಪಿಸಿಕೊಳ್ಳುವಂತಿದೆ. ಅದರಲ್ಲಿಯೂ ಕವಿಕಾವ್ಯಗಳ ಬಗ್ಗೆ ಅವರು ಬರೆಯುತ್ತಿದ್ದ ನೋಟ್ಸ್ ಅಂತೂ ಅದ್ಭುತ" ಎಂದು ಮತ್ತೆ ಮತ್ತೆ ಪ್ರಸ್ತಾಪಿಸಿ ಮಳಗಿಯವರ ಬಗ್ಗೆ ಹೆಮ್ಮೆಯಿಂದ ಮಾತನಾಡುತ್ತಾರೆ. ಮಳಗಿಯವರನ್ನು ಕುರಿತ ಅವರದೇ ಒಂದು ಕಿರುಬರಹವನ್ನು ಅನುಬಂಧವಾಗಿ ಕೊಟ್ಟಿದ್ದೇನೆ.

ಮೇಷ್ಟ್ರಾಗಿ ಸೇರಿ, ಮೇಷ್ಟ್ರಾಗಿ ಬದುಕಿ, ಮೇಷ್ಟ್ರಾಗಿ ನಿವೃತ್ತರಾದ ಮಳಗಿಯವರ ಮೇಷ್ಟ್ರತನದ ಅನುಭವಗಳು ವೈವಿಧ್ಯಮಯ. ಹುಬ್ಬಳ್ಳಿ, ಧಾರವಾಡ, ದಾವಣಗೆರೆ, ಬೆಂಗಳೂರು ಮೊದಲಾದ ಊರುಗಳಲ್ಲಿ ಮೇಷ್ಟ್ರುವೃತ್ತಿ ಮಾಡಿದವರು. ಅಲ್ಲಲ್ಲಿನ ವಿದ್ಯಾರ್ಥಿಗಳ, ಸಹೋದ್ಯೋಗಿಗಳ ಸಂಬಂಧಗಳೂ ಹಲವು ರೀತಿಯದ್ದಾಗಿರುವುದು ಎನ್ನುವುದನ್ನು ಒಪ್ಪಿಕೊಳ್ಳುತ್ತಾರೆ. ಆದರೆ ಅವರ ಸುದೀರ್ಘ ಅಧ್ಯಾಪನ ಬದುಕಿನ ಅನುಭವಗಳನ್ನು ದಾಖಲಿಸಿ ಇರಿಸಿದ್ದರೆ, ಅದೊಂದು ಅನನ್ಯ ಐತಿಹಾಸಿಕ ದಾಖಲೆಯಾಗಿ ಉಳಿಯುತ್ತಿತ್ತು. ಅವರ ಶಿಷ್ಯರಾಗಿದ್ದ ಹೆಸರಾಂತ ಸಾಹಿತಿಗಳ ವಿದ್ಯಾರ್ಥಿ ಜೀವನದ ಬಗೆಗೆ ಒಂದಿಷ್ಟು ಮಾಹಿತಿಗಳೂ ಲಭ್ಯವಾಗುತ್ತಿದ್ದವು.

ಇಂತಹ ಮೇಷ್ಟ್ರುಗಳ ಮೇಷ್ಟ್ರೆಂದು ಕರೆಸಿಕೊಂಡ ಮಳಗಿಯವರು ಬಿಜಾಪುರ ಜಿಲ್ಲೆಯ ಬಾದಾಮಿ ತಾಲ್ಲೂಕಿನ ಖ್ಯಾಡ ಗ್ರಾಮದವರು. ಆಚಾರ್ಯ ಮನೆತನಕ್ಕೆ ಸೇರಿದ ರಾಘವೇಂದ್ರ ಪಾಂಡುರಂಗ ಮಳಗಿ–ಲಕ್ಷ್ಮೀಬಾಯಿ ರಾಘವೇಂದ್ರ ಮಳಗಿ ದಂಪತಿಗಳಿಗೆ ಮಗನಾಗಿ ಜನಿಸಿದ್ದು ಜುಲೈ ೮, ೧೯೧೦ರಲ್ಲಿ. ಅವರ ಓದು ಒಂದು ಕಡೆಗೇ ಸೀಮಿತವಾಗಲಿಲ್ಲ. ಹೊಳೆ ಆಲೂರು, ಗದಗ, ಧಾರವಾಡ ಮುಂತಾದ ಕಡೆಗಳಲ್ಲಿ ಓದು ಮುಂದುವರೆಯಿತು. ೧೦೩೫ರಲ್ಲಿ ಕನ್ನಡ–ಸಂಸ್ಕೃತದೊಂದಿಗೆ ಬಿ.ಎ. ಆನರ್ಸ್ ಪದವಿ ಮುಗಿಸಿ, ೧೯೩೭ರಲ್ಲಿ ಮತ್ತೆ ಕನ್ನಡ–ಸಂಸ್ಕೃತದೊಂದಿಗೆ ಎಂ.ಎ. ಪದವಿಯನ್ನು ಗಳಿಸಿದರು. ಓದು ಅಲ್ಲಿಗೇ ನಿಲ್ಲದೆ ೧೯೪೦ರಲ್ಲಿ ಮುಂಬಯಿ ವಿಶ್ವವಿದ್ಯಾನಿಲಯದಿಂದ ಬಿ.ಟಿ ಪದವಿ ಗಳಿಸಿದರು. ಕೂಡಲೇ ಅವರ ಅಧ್ಯಾಪಕ ವೃತ್ತಿ ಪ್ರಾರಂಭವಾಯಿತು. ಮೊದಲು ೧೯೩೮ರಿಂದ ೧೯೪೨ರವರೆಗೆ ಹುಬ್ಬಳ್ಳಿಯ ನ್ಯೂ ಇಂಗ್ಲಿಷ್ ಸ್ಕೂಲಿನಲ್ಲಿ ಅದಾದ ನಂತರ ೧೯೪೨ರಿಂದ ೬೧ರವರೆಗೆ ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಲೆಕ್ಚರರ್ ಹಾಗೂ ರೀಡರ್ ಆಗಿ ಕೆಲಸ ನಿರ್ವಹಿಸಿದರು. ಧಾರವಾಡದಿಂದ ಬಂದು ದಾವಣಗೆರೆಯ ಧರ್ಮರತ್ನಾಕರ ಮದ್ದೂರಾಯಪ್ಪ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇರಿದರು. ಇಲ್ಲಿ ಹಂ.ಪ. ನಾಗರಾಜಯ್ಯ ಅವರ ಸಹೋದ್ಯೋಗಿ ಯಾಗಿದ್ದರು. ಹಂ.ಪ.ನಾ. ಆ ದಿನಗಳಲ್ಲಿ ಅವರ ಜೊತೆಗಿನ ಮಧುರ ಸ್ನೇಹದ, ಛಂದಸ್ಸು, ವ್ಯಾಕರಣ ಇತ್ಯಾದಿ ವಿಷಯಗಳ ಬಗೆಗಿನ ಚರ್ಚೆಯ ಕ್ಷಣಗಳನ್ನು ನೆನಪಿಸಿ ಕೊಳ್ಳುತ್ತಾರೆ. ಆದರೆ ಮಳಗಿಯವರು ಅಲ್ಲಿ ಬಹಳ ಕಾಲ ಉಳಿಯಲಿಲ್ಲ. ೧೯೬೧ರಲ್ಲಿ ಮುಗಳಿಯವರ ಆಹ್ವಾನದ ಮೇರೆಗೆ ರೀಡರ್ ಆಗಿ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗಕ್ಕೆ ಬಂದರು. ಮುಗಳಿಯವರ ಜೊತೆಗೆ ಅವರದು ಅನನ್ಯ ಸ್ನೇಹ. ಅವರನ್ನಂತೂ ಅಣ್ಣನೆಂದೇ ಭಾವಿಸಿಕೊಂಡಿದ್ದರು. ಮುಗಳಿಯವರು ಸಾಹಿತ್ಯ ಚರಿತ್ರೆಯನ್ನು ಬರೆಯುತ್ತಿದ್ದ ಸಂದರ್ಭದಲ್ಲಿ ಮಳಗಿಯವರ ಸಹಯೋಗ ಅಪಾರವಾಗಿತ್ತು. ಬೆಂಗಳೂರಿನಲ್ಲಿ ಈ ಇಬ್ಬರ ಮನೆಗಳೂ ಅವರ ಮನಗಳಂತೆ ಹತ್ತಿರ ಹತ್ತಿರವಿದ್ದು, ಅವರ ನಡುವೆ ಸಾಹಿತ್ಯಕ ಹಾಗೂ ಬೌದ್ಧಿಕ ಚರ್ಚೆಗಳು ನಿರಂತರವಾಗಿ ನಡೆಯುತ್ತಿದ್ದವು. ಅವರ ನಡುವೆ ಆತ್ಮೀಯತೆ, ಸಹೋದ್ಯೋಗಿ ಮಿತ್ರತ್ವ, ಸೋದರ ಪ್ರೀತಿ ಮಾತ್ರವಲ್ಲದೆ, ಬೇಂದ್ರೆಯವರಿಂದ ಇಬ್ಬರೂ ಬೆಳೆಸಿಕೊಂಡಿದ್ದ ಅರವಿಂದರ ಪ್ರೀತಿಯೂ ಕಾರಣವಾಗಿತ್ತು.

ಮುಗಳಿಯವರು ಅರವಿಂದರ 'ಸಾವಿತ್ರಿ' ಮಹಾಕಾವ್ಯವನ್ನು ಅನುವಾದಿಸಿದ್ದರು ಕೂಡಾ. ಮಳಗಿಯವರಿಗೆ ಧಾರವಾಡದಿಂದಲೇ ಮುಗಳಿಯವರ ಪರಿಚಯವಿತ್ತು. ಬೇಂದ್ರೆಯನ್ನು ಮುಗಳಿಯವರು ತಮ್ಮ ಕಾವ್ಯ ಗುರುವೆಂದು ಆರಾಧಿಸತೊಡಗಿದಂತೆ ಮಳಗಿಯವರೂ ಬೇಂದ್ರೆಯನ್ನು ತಮ್ಮ ಆಧ್ಯಾತ್ಮ ಗುರುವೆಂದು ಆರಾಧಿಸತೊಡಗಿದ್ದರು. ಅರವಿಂದರ ಪ್ರಭಾವಕ್ಕೆ ಒಳಗಾಗಿ ಸಂಪೂರ್ಣವಾಗಿ ಅರವಿಂದರ ತತ್ವದರ್ಶನ, ಸಂಪೂರ್ಣಯೋಗ ಪರಿಕಲ್ಪನೆಗೆ ಮಳಗಿಯವರು ತಮ್ಮನ್ನು ತೆತ್ತುಕೊಳ್ಳಲು ಮುಂದಾದದ್ದು ಬೇಂದ್ರೆಯವರ ಕಾರಣದಿಂದಲೇ. ಮುಗಳಿ–ಮಳಗಿ ಇಬ್ಬರೂ ಧಾರವಾಡದ ಗೆಳೆಯರ ಗುಂಪಿನ ಜೊತೆಗೆ ಒಡನಾಟವಿರಿಸಿಕೊಂಡಿದ್ದವರು. ಅಲ್ಲದೆ ಆ ಗುಂಪಿನಲ್ಲಿದ್ದ ಆಲೂರು ವೆಂಕಟರಾಯರು, ಮಧುರಚೆನ್ನರು (ಹಲಸಂಗಿ ಚೆನ್ನಪ್ಪ), ಆನಂದ ಕಂದ (ಬೆಟಗೇರಿ ಕೃಷ್ಣಶರ್ಮ), ಪ್ರಹ್ಲಾದ ನರೇಗಲ್ಲ, ಶಂ.ಬಾ. ಜೋಶಿ ಮೊದಲಾದ ಅತಿರಥ–ಮಹಾರಥರ ನಿಕಟ ಪರಿಚಯವೂ ಅವರಿಗೆ ಸಾಧ್ಯವಾಯಿತು.

ಮೊದಲಿನಿಂದಲೂ ಹೀಗೆ ಪರಿಚಯವಿದ್ದ ಮುಗಳಿಯವರ ಸಹೋದ್ಯೋಗಿಯಾಗಿ ಕೆಲಸ ನಿರ್ವಹಿಸುವ ಅವಕಾಶ ಬಂದದ್ದು ಮಳಗಿಯವರ ಪಾಲಿಗೆ ಒಂದು ವರದಾನವಾಗಿತ್ತು. ೧೯೬೧ರಿಂದ ೬೯ರವರೆಗೆ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಕೆಲಸ ಮಾಡಿ ನಿವೃತ್ತರಾದ ನಂತರ ಸಾಗರದ (ಶಿವಮೊಗ್ಗ) ಲಾಲ್ ಬಹದ್ದೂರು ಶಾಸ್ತ್ರಿ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ ಕೆಲಸ ನಿರ್ವಹಿಸಿ, ಮತ್ತೆ ಬೆಂಗಳೂರಿಗೆ ವಾಪಸಾಗಿ ೧೯೭೧ರಿಂದ ೭೩ರವರೆಗೆ ಬೆಂಗಳೂರಿನ ಸೇಂಟ್ ಜಾನ್ಸ್ ಜ್ಯೂನಿಯರ್ ಕಾಲೇಜಿನಲ್ಲಿಯೂ, ೧೯೭೩ರಿಂದ ೭೯ರವರೆಗೆ ಯು.ಜಿ.ಸಿ. ಪ್ರಾಧ್ಯಾಪಕ ರಾಗಿಯೂ ಕೆಲಸ ನಿರ್ವಹಿಸಿದರು.

ಈ ಎಲ್ಲ ವಿವರಗಳ ಹಿನ್ನೆಲೆಯಲ್ಲಿ ನೋಡಿದಾಗ, ಮಳಗಿಯವರು ಕೇವಲ ಮೇಷ್ಟ್ರಾಗಿ ಕೆಲಸ ಮಾಡಿದ್ದಾರೆಂಬ ಭಾವನೆ ಬರುವುದು ಸಹಜ. ಅವರಿಗಿದ್ದ ಬೇರೆ ಬೇರೆ ಪ್ರತಿಭೆಯ ಮುಖಗಳಾಗಲೀ, ಅವರು ಬರೆದ ಸಾಹಿತ್ಯವಾಗಲೀ ಅಷ್ಟಾಗಿ ಲೋಕದ ಗಮನಕ್ಕೆ ಬರಲೂ ಇಲ್ಲ ; ಬರಿಸುವ ಪ್ರಯತ್ನವನ್ನೂ ಅವರು ಮಾಡಲಿಲ್ಲ. ಅದಕ್ಕೆ ಅವರ ಆಧ್ಯಾತ್ಮ ಹಾಗೂ ನಿರ್ಲಿಪ್ತ ಮನೋಧರ್ಮವೂ ಕಾರಣವಾಗಿತ್ತು. ಅವರು ಕೆಲಸ ಮಾಡಿದ ಶಾಲಾ ಕಾಲೇಜುಗಳಲ್ಲಿನ ಕನ್ನಡ ಸಂಘ, ಸಂಸ್ಕೃತಿ ಸಂಘಗಳ ಅಧ್ವರ್ಯುತನವನ್ನು ತಾವೇ ವಹಿಸಿಕೊಂಡು, ವಿದ್ಯಾರ್ಥಿಗಳಲ್ಲಿನ ಪ್ರತಿಭೆಯನ್ನು ಗುರುತಿಸಿ ವೇದಿಕೆಗಳನ್ನು ಕಲ್ಪಿಸಿಕೊಟ್ಟವರು ಮಳಗಿ. ಮಳಗಿಯವರಿಗೆ ಸಾಹಿತ್ಯ, ಸಂಗೀತ, ನಾಟಕಗಳ ಬಗ್ಗೆ ಸಾಕಷ್ಟು ಪರಿಶ್ರಮವಿತ್ತು. ಸ್ವತಃ ತಾವೇ ನಾಟಕಗಳನ್ನು ವಿದ್ಯಾರ್ಥಿಗಳಿಗಾಗಿ ನಿರ್ದೇಶಿಸಿ ಪ್ರದರ್ಶನಗಳಿಗೆ ಅವಕಾಶ ಕಲ್ಪಿಸುತ್ತಿದ್ದರು. ವಾಸ್ತವವಾಗಿ ಗಿರೀಶ್ ಕಾರ್ನಾಡರಿಗೆ ನಾಟಕ ಜಗತ್ತಿಗೆ ಪ್ರವೇಶ ಪಡೆಯಲು ಸಾಧ್ಯವಾದದ್ದು ಮಳಗಿಯವರ ಪ್ರೋತ್ಸಾಹದಿಂದಲೇ. ಧಾರವಾಡದಲ್ಲಿನ ನಾಟಕ ಸಂಘದ ನೇತೃತ್ವ ವಹಿಸಿಕೊಂಡು ಗೋಕಾಕರು ರಚಿಸಿದ 'ಜನನಾಯಕ' ನಾಟಕವನ್ನು ನಿರ್ದೇಶಿಸಿ ವಿದ್ಯಾರ್ಥಿ ತಂಡವನ್ನು ದಿಲ್ಲಿಯಲ್ಲಿ ಪ್ರದರ್ಶನ ನೀಡಲು ಕರೆದೊಯ್ದಿದ್ದರು. ಆ ನಾಟಕದಲ್ಲಿ ಗಿರೀಶ್ ಕಾರ್ನಾಡರಿಗೇ ನಾಯಕಪಾತ್ರವನ್ನು

ನೀಡಿದ್ದರು. ಶಾಲಾ–ಕಾಲೇಜುಗಳ ವಾರ್ಷಿಕೋತ್ಸವ, ಸಾಂಸ್ಕೃತಿಕ ಹಬ್ಬಗಳು, ರಾಜ್ಯೋತ್ಸವ ಇತ್ಯಾದಿ ಸಂದರ್ಭಗಳಲ್ಲಿ ಭರ್ಜರಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ರೂಪಿಸುತ್ತಿದ್ದರು. ಈ ಕಾರ್ಯಕ್ರಮಗಳಿಗೆ ಹಿರಿಯ ವಿದ್ವಾಂಸರುಗಳನ್ನು, ಸಾಹಿತಿಗಳನ್ನು, ನಾಟಕಕಾರರನ್ನು ಮುಖ್ಯ ಅತಿಥಿಗಳಾಗಿ ಬರಮಾಡಿಕೊಳ್ಳುತ್ತಿದ್ದರು. ಹೀಗಾಗಿಯೇ ಅವರ ಕಾರ್ಯಕ್ರಮಗಳಿಗೆ ಬಾರದ ವಿದ್ವಾಂಸರಿಲ್ಲ, ಸಾಹಿತಿಗಳಿಲ್ಲ, ನಾಟಕಕಾರರಿಲ್ಲ. ಅವರು ಕೆಲಸ ಮಾಡಿದ ಕರ್ನಾಟಕ ಕಾಲೇಜಿಗೆ ಅತಿಥಿಗಳಾಗಿ ಬಂದವರ ಪೈಕಿ ಕೆಲವರನ್ನಾದರೂ ಹೆಸರಿಸಬಹುದಾದರೆ, ಬಿ.ಎಂ.ಶ್ರೀ., ತೀ.ನಂ.ಶ್ರೀ., ಡಿ.ಎಲ್.ಎನ್., ಜಿ.ಪಿ. ರಾಜರತ್ನಂ, ಸ.ಸ. ಮಾಳವಾಡ, ಶೇ.ಗೋ. ಕುಲಕರ್ಣಿ, ಎನ್.ಕೆ. ಕುಲಕರ್ಣಿ, ರಂ.ಶ್ರೀ. ಮುಗಳಿ, ಜಿ.ವಿ., ಶ್ರೀರಂಗ, ಕೈಲಾಸಂ, ಕುವೆಂಪು, ವಿ.ಎಂ. ಇನಾಂದಾರ್, ಎ.ಎನ್. ಮೂರ್ತಿರಾವ್, ಅಸಕೃ, ವಿ.ಸೀ., ಎಂ.ಆರ್. ಶ್ರೀ., ಡಿ.ವಿ.ಜಿ., ನಾ. ಕಸ್ತೂರಿ, ಸಿ.ಕೆ. ವೆಂಕಟರಾಮಯ್ಯ, ಕೃಷ್ಣಮೂರ್ತಿ ಪುರಾಣಿಕ ಮುಂತಾದ ಇನ್ನೂ ಎಷ್ಟೋ ಮಂದಿ ಇದ್ದಾರೆ.

ಕರ್ನಾಟಕ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ದಿನಗಳನ್ನು ಮಳಗಿಯವರು ನೆನಪಿಸಿಕೊಳ್ಳುತ್ತಾರೆ. ಸ.ಸ. ಮಾಳವಾಡರು ಕಾಲೇಜಿನ ಮುಖ್ಯಸ್ಥರಾಗಿದ್ದರು. ಕುವೆಂಪು ಮತ್ತು ಮಾಳವಾಡರು ದೊಡ್ಡ ಸ್ನೇಹಿತರಾಗಿದ್ದುದರಿಂದ ಪದೇ ಪದೇ ಭೇಟಿಯಾಗುತ್ತಿದ್ದರು. ಕಾಲೇಜಾಗಿ ಇದ್ದುದು ಯೂನಿವರ್ಸಿಟಿಯಾಗಿ ಮಾರ್ಪಾಡಾದಾಗ, ಮಳಗಿಯವರು ಯೂನಿವರ್ಸಿಟಿಗೆ ಹೋಗದೆ ಕಾಲೇಜಿನಲ್ಲಿಯೇ ಉಳಿದುಕೊಂಡರು. ಕಾರಣ ಮಳಗಿಯವರಿಗೆ ಕರ್ನಾಟಕ ಕಾಲೇಜನ್ನು ಮಾಡೆಲ್ ಕಾಲೇಜಾಗಿ ಪರಿವರ್ತಿಸಬೇಕೆಂಬ ಉದ್ದೇಶವಿತ್ತು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರೊ. ಆರ್.ಸಿ. ಹಿರೇಮಠ, ತೀ.ನಂ. ಶ್ರೀಕಂಠಯ್ಯ ಮೊದಲಾದ ವಿದ್ವಾಂಸರಿದ್ದರು. ಚೆನ್ನವೀರ ಕಣವಿಯವರು ೧೯೪೬–೫೨ರವರೆಗೆ ಮಳಗಿಯವರ ವಿದ್ಯಾರ್ಥಿಯಾಗಿದ್ದರು. ತಮ್ಮ ಗುರುಗಳ ಬಗ್ಗೆ ಅವರು ಅತ್ಯಂತ ಅಭಿಮಾನದಿಂದ ಮಾತನಾಡುತ್ತಾರೆ. ಕಣವಿಯವರ ಬಗ್ಗೆ ಮಳಗಿಯವರಿಗೆ ಅಪಾರ ಪ್ರೀತಿ. ವಿದ್ಯಾರ್ಥಿ ದೆಸೆಯಲ್ಲಿ ಇರುವಾಗಲೇ ಕಣವಿಯವರ ಕಾವ್ಯ ಪ್ರತಿಭೆಯನ್ನು ಇವರು ಗುರುತಿಸಿ ಪ್ರೋತ್ಸಾಹಿಸಿದರು. ೧೯೪೯ರಲ್ಲಿ ಕಣವಿಯವರ ಚೊಚ್ಚಲ ಕವನ ಸಂಕಲನ 'ಕಾವ್ಯಾಕ್ಷಿ' ಪ್ರಕಟವಾಯಿತು. ಆಗಿನ್ನೂ ಅವರು ಮೊದಲ ಬಿ.ಎ. ಓದುತ್ತಿದ್ದರು. ನಂತರ ೧೯೫೧ರಲ್ಲಿ 'ಭಾವಜೀವಿ' ಸಂಕಲನ ಗೋಕಾಕರ ಮುನ್ನುಡಿಯೊಂದಿಗೆ ಪ್ರಕಟವಾಯಿತು. ಈ ಎರಡೂ ಸಂಕಲನಗಳ ಬಗ್ಗೆ ಮಳಗಿಯವರು ತುಂಬು ಪ್ರೀತಿಯಿಂದ ದೊಡ್ಡ ವಿಮರ್ಶಾತ್ಮಕ ಲೇಖನವನ್ನೇ ಬರೆದು ಮೆಚ್ಚುಗೆ ಸೂಚಿಸಿದ್ದನ್ನು ಸ್ವತಃ ಕಣವಿಯವರೇ ತಿಳಿಸಿ, ತಮ್ಮ ಗುರುಗಳ ಬಗ್ಗೆ ಪ್ರೀತಿ ಆದರಗಳನ್ನು ವ್ಯಕ್ತಪಡಿಸಿದ್ದಾರೆ. ತಾವು ಹೆಚ್ಚಾಗಿ ಬರೆಯದಿದ್ದರೂ ಬರೆಯುವ ಸಾಮರ್ಥ್ಯ ಇರುವವರನ್ನು ಗುರುತಿಸಿ ಅವರಿಂದ ಲೇಖನ, ಕವಿತೆ ಬರೆಸಿ ಮಳಗಿ ಪ್ರೋತ್ಸಾಹಿಸಿದ್ದಾರೆ.

ಹೀಗೆಂದಾಗ ಮಳಗಿಯವರು ಏನನ್ನೂ ಬರೆದಿಲ್ಲವೆಂದೇನಿಲ್ಲ. ಸಾಕಷ್ಟು ಬರೆದಿದ್ದಾರೆ. ಆದರೆ ಪ್ರಕಟವಾದದ್ದು ಮಾತ್ರ ಸ್ವಲ್ಪವೇ. ಮಳಗಿಯವರ ಒಲವು ಸೃಜನಶೀಲ ಸಾಹಿತ್ಯಕ್ಕಿಂತ ಶಾಸ್ತ್ರ ಸಾಹಿತ್ಯ, ಅಧ್ಯಾತ್ಮ ಸಾಹಿತ್ಯದ ಕಡೆಗೇ ಹೆಚ್ಚು. ಅದರಲ್ಲಿಯೂ ಬೇಂದ್ರೆಯವರಿಂದ

ಅರವಿಂದರು ಮತ್ತು ಮಾತಾರ ಬಗ್ಗೆ, ಅವರ ದರ್ಶನ-ಚಿಂತನಗಳ ಬಗ್ಗೆ ತಿಳಿದ ಮೇಲೆ, ಸಂಪೂರ್ಣವಾಗಿ ತಮ್ಮನ್ನು ಆಧ್ಯಾತ್ಮಿಕ ಚಿಂತನೆಗಳಿಗೆ ಬದ್ಧಗೊಳಿಸಿಕೊಂಡರು. ಶ್ರೀ ಅರವಿಂದರು ೧೯೦೪ರಿಂದಲೇ ತಮ್ಮ ನಿರಂತರ ಸಾಧನೆಯ ಮೂಲಕ ಹೊಚ್ಚ ಹೊಸ ಶೋಧವಾದ 'ಪೂರ್ಣಯೋಗ' ಅಥವಾ 'ಸಮಗ್ರಯೋಗ'ದ ಬಗ್ಗೆ ಅನುಸಂಧಾನ ಮಾಡಿದರು. ಮಳಗಿಯವರು ಅದರ ಗೊತ್ತುಗುರಿಗಳನ್ನು ಕುರಿತು ಮನನ ಮಾಡಿದರು. ತಾವು ಅರ್ಥೈಸಿಕೊಂಡ, ಅನುಭಾವಿಸಿಕೊಂಡ ಇಂತಹ ಯೋಗದ ಪರಿಕಲ್ಪನೆಯ ಸ್ವರೂಪವನ್ನು ಜನಸಾಮಾನ್ಯರ ಅರಿವಿಗೆ ಬರುವಂತೆ ಸರಳವಾದ ರೀತಿಯಲ್ಲಿ, ಸ್ಪಷ್ಟವಾದ ಮಾತುಗಳಲ್ಲಿ, ಪರಿಚಯಾತ್ಮಕ ನೆಲೆಯಲ್ಲಿ ಲೇಖನಗಳನ್ನು ಬರೆದರು. ಅರವಿಂದರು ಮತ್ತು ಮಾತಾರ ದಿವ್ಯ ಚಿಂತನೆಗಳ ಹಲವಾರು ಮುಖಗಳನ್ನು ಕುರಿತು ಬಹಳಷ್ಟು ಸಂಖ್ಯೆಯ ಆಧ್ಯಾತ್ಮಿಕ ಲೇಖನಗಳನ್ನು ರಚಿಸಿ ಪ್ರಕಟಿಸಿದರು. ಮಾತಾರವಿಂದರ ಬಗೆಗಿನ ಅವರ ಅಪಾರ ಶ್ರದ್ಧೆಯನ್ನು ಮನಗಂಡೇ ಪಾಂಡಿಚೇರಿಯಲ್ಲಿನ ಅರವಿಂದರ ಆಶ್ರಮದಿಂದ ಪ್ರಕಟವಾಗಿರುವ 'ಅಖಿಲ ಭಾರತ ಪತ್ರಿಕೆ'ಯ ಪ್ರಧಾನ ಸಂಪಾದಕತ್ವದ ಜವಾಬ್ದಾರಿಯನ್ನು ಅವರಿಗೆ ವಹಿಸಲಾಗಿತ್ತು. ೧೯೭೦ರಿಂದ ೧೯೯೫ರವರೆಗೆ ಸತತವಾಗಿ ೨೫ ವರ್ಷಗಳ ಕಾಲ ಆ ಪತ್ರಿಕೆಯ ಸಂಪಾದಕರಾಗಿ ಮಳಗಿಯವರು ಬರೆದ ಸಂಪಾದಕೀಯಗಳು ಮಹತ್ವದ್ದಾಗಿ ಪರಿಗಣಿಸಲ್ಪಟ್ಟಿವೆ. ಅವುಗಳನ್ನು ಸಂಕಲಿಸಿ ಪ್ರಕಟಿಸಿದರೆ ಅಮೂಲ್ಯ ಆಧ್ಯಾತ್ಮಿಕ ಚಿಂತನೆಗಳ ಹೊತ್ತಿಗೆಯಾದೀತು. ಆದರೆ ಅವರಲ್ಲಿಯೇ ಆ ಪತ್ರಿಕೆಯ ಪ್ರತಿಗಳು ಇಲ್ಲವಾಗಿರುವುದು ದುರದೃಷ್ಟಕರ ಸಂಗತಿ. ಮಾತೆಯವರ ಬಗ್ಗೆ ಎಷ್ಟೊಂದು ಅಭಿಮಾನ, ಶ್ರದ್ಧೆಗಳನ್ನು ಇರಿಸಿಕೊಂಡು ಅವರಿಗೆ ಹತ್ತಿರವಾಗಿದ್ದರೆಂದರೆ, ಮಾತೆಯವರೇ ಖುದ್ದಾಗಿ ಮಳಗಿಯವರನ್ನು ಬರಮಾಡಿಕೊಂಡು ಆಶೀರ್ವದಿಸಿ ತಮ್ಮ ಭಾವಚಿತ್ರವನ್ನು ನೀಡಿದ್ದರಂತೆ. ಹೀಗಾಗಿ ಮಳಗಿಯವರಿಗಿದ್ದ ಮಾತಾರವಿಂದರ ಬಗೆಗಿನ ಅಪಾರ ಗೌರವ, ಶ್ರದ್ಧೆ ಮತ್ತು ಅಧ್ಯಾತ್ಮದ ಕಡೆಗಿನ ಒಲವಿನಿಂದಾಗಿ ಬಹುಶಃ ಸಾಹಿತ್ಯಕ ಬರಹಗಳ ಕಡೆಗೆ ಅಷ್ಟಾಗಿ ಅವರು ಗಮನಹರಿಸಲು ಸಾಧ್ಯವಾಗಿಲ್ಲದಿರಬಹುದು.

ಮಳಗಿಯವರು ಸ್ನೇಹಪ್ರಿಯರು. ವಿದ್ಯಾರ್ಥಿಗಳು, ಸಹಪಾಠಿಗಳು, ಸಹೋದ್ಯೋಗಿಗಳು ಎಲ್ಲರ ಬಗ್ಗೆ ಅಭಿಮಾನ, ಸ್ನೇಹ, ಕಾಳಜಿ, ಇರಿಸಿಕೊಂಡಿದ್ದವರು. ಸ್ನೇಹ ಪ್ರವೃತ್ತಿಯ ಜೊತೆಗೆ ಹಾಸ್ಯಪ್ರವೃತ್ತಿಯೂ ಅವರಲ್ಲಿತ್ತು. ಬೇರೆಯವರಲ್ಲಿ ಇರುವ ಪ್ರತಿಭೆ, ಗುಣಗಳನ್ನು ಗುರುತಿಸಿ ಅವರನ್ನು ಮುಕ್ತ ಕಂಠದಿಂದ ಮೆಚ್ಚಿ ಹೊಗಳುತ್ತಿದ್ದರು. ವಿದ್ಯಾರ್ಥಿ ದೆಸೆಯಲ್ಲಿ ಅವರಿಗೆ ಸಾಕಷ್ಟು ಮಂದಿ ಸ್ನೇಹಿತರಿದ್ದರು. ಹದಿಹರೆಯದ ವಯಸ್ಸಿನಲ್ಲಿ ಇರಬಹುದಾದ ತುಂಟತನಗಳಿಂದಲೂ ಹೊರತಾಗಿರಲಿಲ್ಲ. ಅವರ ವಿದ್ಯಾರ್ಥಿ ದೆಸೆಯಲ್ಲಿ ದಿನಗಳ ಮೆಲುಕುಗಳನ್ನು ಅವರ ಆಪ್ತ ಗೆಳೆಯ, ಸಹಪಾಠಿ ಆಗಿದ್ದ ಪಿ.ವಿ. ಜೋಶಿ ಅವರನ್ನು ಕುರಿತು ಬರೆದ ಲೇಖನ ಒಂದರಲ್ಲಿ ದಾಖಲಿಸಿದ್ದಾರೆ. ಅರವತ್ತೈದು ವರ್ಷಗಳ ಹಿಂದಿನ ನೆನಪುಗಳ ಹಿನ್ನೆಲೆಯಲ್ಲಿ ಜೋಶಿ ಅವರೊಂದಿಗಿದ್ದ ಸ್ನೇಹಸಂಬಂಧ, ಅವರೊಂದಿಗಿನ ಒಡನಾಟ, ಜೋಶಿ ಮತ್ತು ಗೆಳೆಯರೊಂದಿಗೆ ನಡೆದ ರಸಪ್ರಸಂಗಗಳು, ಅವರೆಲ್ಲರ ಸ್ವಭಾವ ಇತ್ಯಾದಿಗಳ ಬಗ್ಗೆ ಅಲ್ಲಿ ಮಳಗಿಯವರು ಮೈದುಂಬಿ ಮನದುಂಬಿ ಮಾತಾಡಿದ್ದಾರೆ.

ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಮೊದಲ ವರ್ಷದ ಬಿ.ಎ. ಓದುತ್ತಿದ್ದಾಗ ಮಳಗಿಯವರಿಗೆ ಜೋಶಿಯವರ ಪರಿಚಯವಾಯಿತು. ಇವರಂತೆಯೇ ಜೋಶಿಯವರೂ ವಿಜಾಪುರದ ಸರ್ಕಾರಿ ಹೈಸ್ಕೂಲಿನಿಂದ ಒಂದು ಶಿಷ್ಯವೇತನ ಪಡೆದು ಇದೇ ಕಾಲೇಜಿಗೆ ಬಂದು ಸೇರಿದ್ದರು. ಆಗ ಇವರ ಜೊತೆಯಲ್ಲಿ ಇದ್ದ ಇನ್ನು ಕೆಲವು ವಿದ್ಯಾರ್ಥಿ ಮಿತ್ರರೆಂದರೆ ಆರ್.ಬಿ. ಕುಲಕರ್ಣಿ (ರಾವ್‌ಬಹಾದ್ದೂರ್ ಹೆಸರಿನ ಕಾದಂಬರಿಕಾರರು), ವಿ.ಎಂ. ಇನಾಂದಾರ್ ಮತ್ತು ಇನ್ನಿತರರು. ಇವರೆಲ್ಲ ಸೇರಿಕೊಂಡು ಇಡೀ ಕರ್ನಾಟಕ ಕಾಲೇಜಿನ ವಿಶಾಲ ರಾಜಮಾರ್ಗದಲ್ಲಿ ನಗೆಯಾಡುತ್ತಾ ಹರಟೆ ಹೊಡೆಯುತ್ತಾ ಸುತ್ತಾಡುತ್ತಿದ್ದುದನ್ನು ಮಳಗಿ ಖುಶಿಯಿಂದ ಸ್ಮರಿಸಿಕೊಳ್ಳುತ್ತಾರೆ. ಆರ್.ಬಿ. ಕುಲಕರ್ಣಿಯನ್ನು 'ಆರ್‌ಬ್ಯಾ' ಎಂದು ನಗೆಯಾಡುತ್ತಿದ್ದ, ಹೊಸ ಹೊಸ ವಾದ ವಿವಾದಗಳನ್ನು ಹೂಡುತ್ತಾ ಕೇಕೆ ಹೊಡೆಯುತ್ತಾ ಖೊಳ್ಳ ಖೊಳ್ಳನೆ ನಗುತ್ತಿದ್ದ ಪ್ರಸಂಗಗಳನ್ನು ನೆನಪು ಮಾಡಿಕೊಳ್ಳುತ್ತಾರೆ. ಎಲ್ಲ ಸ್ನೇಹಿತರಿಗಿಂತಲೂ ಪಿ.ವಿ. ಯವರ ಜೊತೆ ಹೆಚ್ಚಿನ ಆಪ್ತತೆ, ಆತ್ಮೀಯತೆಗಳನ್ನು ಬೆಳೆಸಿಕೊಂಡಿದ್ದರು. ಅವರ ದಿಟ್ಟತನ, ಕುಶಲ ಮಾತುಗಾರಿಕೆ, ಆವೇಶ ಅಬ್ಬರಗಳು, ಅವರಲ್ಲಿನ ಅಚಲ ಆತ್ಮವಿಶ್ವಾಸ ಇತ್ಯಾದಿ ಮಳಗಿಯವರನ್ನು ಸಂಪೂರ್ಣವಾಗಿ ಮುಗ್ಧಗೊಳಿಸಿದ್ದವು.

ಆ ಹೊತ್ತಿಗೆ, ಮಳಗಿಯವರು ಕರ್ನಾಟಕ ಕುಲಪುರೋಹಿತರೆಂದು ಕರೆಸಿಕೊಂಡಿದ್ದ ಆಲೂರು ವೆಂಕಟರಾಯರು, ವರಕವಿ ದ.ರಾ. ಬೇಂದ್ರೆ, ಕರ್ನಾಟಕ ಇತಿಹಾಸ ಸಂಸ್ಕೃತಿ ಸಂಶೋಧಕ ಶಂ.ಬಾ. ಜೋಶಿ., ವಿ.ಕೃ. ಗೋಕಾಕ ಹಾಗೂ ರಂ.ಶ್ರೀ. ಮುಗಳಿ ಮುಂತಾದವರ ಪರಿಚಯವಿರಿಸಿಕೊಂಡಿದ್ದೇ ಅಲ್ಲದೆ, ಆ ಮಹಾನುಭಾವರ ದಟ್ಟ ಪ್ರಭಾವಕ್ಕೆ ಒಳಗಾಗಿದ್ದರು. ಪರಿಣಾವಾಗಿ ಭಾವಗೀತೆಗಳ ರಚನೆಗೆ ಕೈ ಹಾಕಿದ್ದರು. ತಾವು ಬರೆದ ಭಾವಗೀತೆಗಳಿಗೆ ತಾವೇ ರಾಗ ಸಯೋಜನೆಯನ್ನೂ ಮಾಡಿ ಕರ್ನಾಟಕ ಸಂಘದ ಸಭೆ, ಸಮಾರಂಭಗಳಲ್ಲಿ ಹಾಡುತ್ತಿದ್ದರು. ಅವರಿಗೆ ಒಳ್ಳೆಯ ಕಂಠವೂ ಇತ್ತು. (ನಮಗೆ ಛಂದಸ್ಸಿನ ಪಾಠ ಮಾಡುವಾಗ ಉದಾಹರಣೆಗೆಂದಿರುವ ಕಾವ್ಯ ಭಾಗಗಳನ್ನು, ಪದ್ಯಗಳನ್ನು ಸುಶ್ರಾವ್ಯವಾಗಿ ಅವರು ಹಾಡುತ್ತಿದ್ದುದು ಇನ್ನೂ ನನ್ನ ನೆನಪಿನಲ್ಲಿದೆ.) ತಮ್ಮ ಕವಿತೆಗಳನ್ನು ಹಾಡುವುದರ ಜೊತೆಗೆ ಬೇಂದ್ರೆ, ವಿ.ಸೀ., ಪಂಜೆ, ಪುಟ್ಟಪ್ಪ ಮೊದಲಾದವರ ಕವಿತೆಗಳನ್ನು ಹಾಡುತ್ತಿದ್ದರು. ಅವರು ಹಾಡುತ್ತಿದ್ದ ಕವಿತೆಗಳಲ್ಲಿ 'ಮಗು' ಎಂಬ ಕವಿತೆಯೊಂದಿತ್ತು. ಅದನ್ನು ಹಾಡಿದ ನಂತರದ ಸಂದರ್ಭವನ್ನು ಅವರು ಹೀಗೆ ನೆನಪಿಸಿಕೊಳ್ಳುತ್ತಾರೆ: "ನನ್ನದೊಂದು ಕವಿತೆ 'ಮಗು' ಎಂಬುದು ಕರ್ನಾಟಕ ಕಾಲೇಜಿನ 'ಮಿಸಲೆನಿ' ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಅದು ಮೈಸೂರು ವಿಶ್ವವಿದ್ಯಾಲಯದ ಆಗಿನ ಕನ್ನಡ ಪ್ರಾಧ್ಯಾಪಕರೂ 'ಪ್ರಬುದ್ಧ ಕರ್ನಾಟಕ' ಪತ್ರಿಕೆಯ ಸಂಪಾದಕರೂ ಆಗಿದ್ದ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳ ಗಮನ ಸೆಳೆದದ್ದು ನನ್ನ ಭಾಗ್ಯ ವಿಶೇಷವಾಗಿತ್ತು. ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲ್ ಆಗಿದ್ದ ಫ್ಯಾರನ್ ಅವರ ಅನುಮತಿ ಪಡೆದು ಆ ಕವಿತೆಯನ್ನು 'ಪ್ರಬುದ್ಧ ಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟಿಸಿದರು. ಅದನ್ನು ಕಂಡು ಮೆಚ್ಚಿ ಮೊದಲು ಅಭಿನಂದಿಸಿದವರು ಪಿ.ವಿ. ಅವರು ಎಂಬುದು ನನ್ನ ನೆನಪು. 'ಮಗು' ಕವಿತೆಯ

ಕಾರಣದಿಂದ ನನಗೆ 'ಮಗು' ಎಂದು ಚೇಷ್ಟೆಯ ನಾಮಕರಣವಾಗಿತ್ತು. ಅದು ಗೊತ್ತಾದುದು ನನಗೆ ಇತ್ತೀಚೆಗೆ ಮಾತ್ರ" ಎಂದು ವಿವರಿಸಿದ್ದಾರೆ.

ಜ್ಯೂನಿಯರ್ ಬಿ.ಎ. ಯಲ್ಲಿದ್ದಾಗಲೇ ಕರ್ನಾಟಕ ಕಾಲೇಜಿನ 'ಮಿಸಲೆನಿ' ಪತ್ರಿಕೆಯ ಕನ್ನಡ ವಿಭಾಗಕ್ಕೆ ಸಂಪಾದಕರಾಗಿ ಕೆಲಸ ಮಾಡಿದರು. ಪಿ.ವಿ. ಅವರ ಬಗ್ಗೆ ಇದ್ದ ಗಾಢ ಸ್ನೇಹ, ಅವರಲ್ಲಿದ್ದ ಸೃಜನಶೀಲ ಪ್ರವೃತ್ತಿಗೆ ಪ್ರೋತ್ಸಾಹ ಕೊಡುವ ನೆಲೆಯಲ್ಲಿ ಪಿ.ವಿ. ಜೋಶಿ ಅವರು ಬರೆದ ದಾಸರ ಪದದ ಧಾಟಿಯಲ್ಲಿ ರಚಿಸಿದ ಕವಿತೆಯನ್ನೂ ಕನ್ನಡದ ವೈಷ್ಣವ ದಾಸವರ್ಯರನ್ನು ಕುರಿತು ಬರೆದ ಲೇಖನವನ್ನೂ 'ಮಿಸಲೆನಿ' ಪತ್ರಿಕೆಯಲ್ಲಿ ಪ್ರಕಟಿಸಿದರು. ಬಹುಶಃ ಮಳಗಿಯವರ ಈ ಬಗೆಯ ಪ್ರೋತ್ಸಾಹವೇ ಪಿ.ವಿ. ಜೋಶಿಯವರಲ್ಲಿ ಅಡಗಿದ್ದ ಮಾಧ್ವಸಿದ್ಧಾಂತದ ಬಗೆಗಿನ ಒಲವನ್ನು ತಟ್ಟಿ ಎಬ್ಬಿಸಿ, ಮುಂದೆಯೂ ಅದು ಪ್ರಬಲವಾಗಿ ಅವರಲ್ಲಿ ಬೆಳೆದು ಜೀವಮಾನದುದ್ದಕ್ಕೂ ಮಾಧ್ವ ಸಾಹಿತ್ಯ, ಸಿದ್ಧಾಂತಗಳಿಗೆ ಬದ್ಧರಾಗಿ ಬರೆಯಲು ಪ್ರಬಲ ಪ್ರಚೋದನೆಯಾಗಿ ಕೆಲಸ ಮಾಡಿರಬೇಕು ಎಂಬ ಭಾವನೆ ಮಳಗಿಯವರಿಗೂ ಇದ್ದಂತಿದೆ. ತಮಗಿರುವ ಹಿರಿಯ ಸಾಹಿತಿಗಳ ಪರಿಚಯ ಜೋಶಿ ಅವರಿಗೂ ಆಗಲೆಂಬ ಸದಾಶಯದೊಂದಿಗೆ ಅವರನ್ನೂ ಸಾಧನಕೇರಿಗೆ ಕರೆದೊಯ್ದು ಆಲೂರರ, ಬೇಂದ್ರೆಯವರ, ಶಂಬಾ ಜೋಶಿಯವರ ಪರಿಚಯ ಮಾಡಿಸಿದರು. ಆಲೂರರು ಅದೇ ಸಂದರ್ಭದಲ್ಲಿ ಈ ಇಬ್ಬರು ಗೆಳೆಯರಿಗೂ ನವಜೀವನ ಗ್ರಂಥಮಾಲೆಯು ಹೊರತಂದಿದ್ದ ಹೊಸ ಹೊಸ ಗ್ರಂಥಗಳ ಬಗ್ಗೆ, ಕರ್ನಾಟಕ ಏಕೀಕರಣದ ಬಗ್ಗೆ, ಮಧ್ವಾಚಾರ್ಯರ ಸಿದ್ಧಾಂತಗಳ ಬಗ್ಗೆ ಗಂಟೆಗಟ್ಟಲೆ ಮಾತಾಡಿದ್ದರಂತೆ. ಆಲೂರರ ಕನ್ನಡ ನಾಡು, ನುಡಿಯ ಬಗೆಗಿದ್ದ ಅದಮ್ಯ ಪ್ರೀತಿ ಉತ್ಸಾಹಗಳನ್ನು ಕಂಡು ಬೆರಗಾಗಿದ್ದ ಮಳಗಿಯವರು ಅವರ ವಿಷಯವಾಗಿ ಆರಾಧನಾ ಭಾವನೆಯನ್ನು ಬೆಳೆಸಿಕೊಂಡುಬಿಟ್ಟಿದ್ದರು.

ಮಳಗಿಯವರು ಕನ್ನಡ ಆನರ್ಸ್‌ನಲ್ಲಿ ಪ್ರಥಮ ಅಥವಾ ಜ್ಯೂನಿಯರ್ ಬಿ.ಎ. ಪರೀಕ್ಷೆಯಲ್ಲ ಮೊದಲ ರ‍್ಯಾಂಕ್ ಪಡೆದು ಶಿಷ್ಯವೇತನಕ್ಕೆ ಭಾಜನರಾದರು. ಕಾಲೇಜಿನ ಹತ್ತಿರದ ಲಿಬರಲ್ ಹಾಸ್ಟೆಲ್‌ನಲ್ಲಿ ಪುಕ್ಕಟೆ ವಸತಿ ಸೌಲಭ್ಯವನ್ನೂ ಗಿಟ್ಟಿಸಿಕೊಂಡರು. ಇವರ ಆಪ್ತ ಸ್ನೇಹಿತರಾದ ಜೋಶಿ ಅವರೂ ಇವರ ಬೆನ್ನ ಹಿಂದೆಯೇ ಬಂದು ಅದೇ ಹಾಸ್ಟೆಲ್‌ನಲ್ಲಿ ಸೇರಿಕೊಂಡರು. ಇವರದೇ ಆದ ಒಂದು ಗೆಳೆಯರ ಬಳಗ ನಿರ್ಮಾಣವಾಗಿ, ಆ ಬಳಗದಲ್ಲಿ ಪಿ.ಬಿ. ದೇಸಾಯಿ (ಮುಂದೆ ಹೆಸರಾಂತ ಇತಿಹಾಸ ಸಂಶೋಧಕರು), ನೆಗಳೂರು ರಂಗನಾಥ, ಎಚ್.ಎಸ್. ಪಾಟೀಲ, ಕಡಲಬಾಳ ಪ್ರಹ್ಲಾದರು (ಹೊಸಪೇಟೆಯಲ್ಲಿ ಈಗ ಹೆಸರಾಂತ ವಕೀಲರು), ಹೇಜಿಬರು–ಮೊದಲಾದವರು ಇದ್ದು ಸ್ನೇಹದ ಸವಿಯನ್ನು ಅನುಭವಿಸುತ್ತಾ, ಹುಡುಗಾಟಿಕೆ, ಚೇಷ್ಟೆಗಳಲ್ಲಿ ಸಂತೋಷ ಕೂಟಗಳಲ್ಲಿ ಸೇರುತ್ತಾ ತಮ್ಮದೇ ಆದ ಒಂದು ಅದ್ಭುತ ಲೋಕವನ್ನು ಸೃಷ್ಟಿಸಿಕೊಂಡು ವಿದ್ಯಾರ್ಥಿ ಬದುಕಿನ ಆನಂದದ ಕ್ಷಣಗಳನ್ನು ಅನುಭವಿಸುತ್ತಿದ್ದರು. ಇಂಥ ಸಂತೋಷಕೂಟಗಳಲ್ಲಿ 'ಮೊಸರವಲಕ್ಕಿಯ ಸಂತೋಷ ಕೂಟ'ವನ್ನು ಮಳಗಿ ತುಂಬಾ ನೆನಪಿಸಿಕೊಳ್ಳುತ್ತಾರೆ. ತಮ್ಮ ಅಂದಿನ ಆ ಅನುಭವವನ್ನೂ ಅವರೇ ಹೀಗೆ ವಿವರಿಸುತ್ತಾರೆ:

"ಸಾಮಾನ್ಯವಾಗಿ ಬೆಳಗಿನ ಹೊತ್ತು ನಾವೆಲ್ಲರೂ ಚಹಾಪಾನ ಮಾಡುತ್ತಿದ್ದೆವು. ನಮ್ಮ ಗೆಳೆಯರ ಬಳಗದ ನೆಗಳೂರು ರಂಗ, ಪಾಟೀಲ ಹನುಮ ತಮ್ಮನ್ನು ರಂಗ-ಮಂಗರೆಂದು ತಾವೇ ಕರೆದುಕೊಳ್ಳುತ್ತಿದ್ದರು. ಈ ರಂಗ-ಮಂಗರ ಚೇಷ್ಟೆಗೆ ಮಿತಿಯಿರಲಿಲ್ಲ. ಕಾಲೇಜಿನಲ್ಲಿ ರಂಗ-ಮಂಗ ಮಂಟಪ ಸ್ಥಾಪಿಸಿ ಸಾಹಿತ್ಯ ಸೇವೆಗೂ ಮುಂದಾಗಿದ್ದರು. ಸಂತೋಷ ಕೂಟಗಳ ವ್ಯವಸ್ಥೆಯನ್ನೂ ಇವರೇ ಮಾಡುತ್ತಿದ್ದರು. ಹೀಗಿರುವಾಗ ಒಮ್ಮೆ ಮೊಸರವಲಕ್ಕಿಯ ಸಂತೋಷಕೂಟವನ್ನು ಯೋಜಿಸಿದರು. ಸಾಧನಕೇರಿಯ ನಿರ್ದಿಷ್ಟ ಜಾಗವೊಂದರಲ್ಲಿ ಗಿಡಮರಗಳ ನಡುವೆ ಸುಮಾರು ಒಂದು ಅಡಿ ಎತ್ತರದ ಕೊಳಗದ ತುಂಬ ಕೆನೆಮೊಸರವಲಕ್ಕಿ ನಮ್ಮ ದಾರಿ ಕಾಯುತ್ತಿತ್ತು. ಹತ್ತಾರು ಗಡಿಗೆ ಕೆನೆಮೊಸರನ್ನು ಹತ್ತಿರದ ಹಳ್ಳಿ ಕೆಲಗೆರೆಯಿಂದ ತರಿಸಿ ಇದನ್ನು ಸಿದ್ಧಪಡಿಸಲಾಗಿತ್ತು. ಸೂರ್ಯಾಸ್ತವಾಗಿ ಕತ್ತಲು ಕವಿದಿತ್ತು. ಬೆಳಕು ಸಾಲದೆಂದು ಪೆಟ್ರೋಮೇಕ್ಸ್ ಒಂದನ್ನು ತರಿಸಲಾಗಿತ್ತು. ಅದರ ಬೆಳಕಿನಲ್ಲಿ ಕುಳಿತು ತಟ್ಟೆಯಲ್ಲಿ ಕುಳಿತ ಮೊಸರವಲಕ್ಕಿ ನಮ್ಮೆಲ್ಲರೆಡೆಗೆ ಬರುವುದೆಂದು ಕಾಯುತ್ತಿದ್ದೆವು. ಆದರೆ ಬರುವ ಸೂಚನೆಯೇ ಕಾಣಿಸಲಿಲ್ಲ. ರಂಗ-ಮಂಗರ ಆಲೋಚನೆ ಬೇರೆಯೇ ಆಗಿತ್ತು. ಇಬ್ಬರೂ ಎದ್ದು ನಿಂತು 'ತಟ್ಟೆಗಳ ವ್ಯವಸ್ಥೆ ಇಲ್ಲ. ಎಲ್ಲರೂ ಕೊಳಗದೊಳಕ್ಕೆ ಕೈಹಾಕಿ ಭುಂಜಿಸಬೇಕು' ಎಂದುಬಿಟ್ಟರು. ಏನು ಮಾಡುವುದು ತೋಚಲಿಲ್ಲ. ನಾನು ಮತ್ತು ಪಿ.ವಿ. ಒಬ್ಬರ ಮುಖವನ್ನೊಬ್ಬರು ನೋಡಿಕೊಂಡೆವು. ತಟ್ಟೆಗಳಿಲ್ಲದೆ ಹೇಗೆ ಎನ್ನುವುದೆಂದು ಯೋಚಿಸುತ್ತಿದ್ದಾಗಲೇ ರಂಗ-ಮಂಗರು, ಪಿ.ಬಿ. ದೇಸಾಯಿಯವರು 'ಹೂಂ ಕೈ ಹಾಕಿ' ಸಾರಿ ಹೇಳಿದರು. ವಿಧಿಯಿಲ್ಲದೆ ಉಪಾಯ ಗಾಣದೆ ಮೊಸರವಲಕ್ಕಿಯ ಸೆಳೆತ ಹತ್ತಿಕ್ಕಲಾಗದೆ ಕೊಳಗದೊಳಕ್ಕೆ ಕೈ ಹಾಕಿಯೇ ಬಿಟ್ಟೆವು. ಆರೆಂಟು ಮಂದಿ ಸರಭರನೆ ಮೊಸರವಲಕ್ಕಿಯ ಕೊಳಗವನ್ನು ಅರೆಗಳಿಗೆಯಲ್ಲಿಯೇ ಬರಿದು ಮಾಡಿಬಿಟ್ಟೆವು. 'ಎಂಜಲು' ಎಂಬ ಮಾತೇ ಮರೆತು ಹೋಗಿತ್ತು." ಅವರು ಸಂಗತಿಗಳನ್ನು ನಿರೂಪಿಸಿರುವ ರೀತಿಯನ್ನು ನೋಡಿದರೆ ಒಳ್ಳೆಯ ಲಲಿತಪ್ರಬಂಧಕಾರರಾಗುವ ಸಾಧ್ಯತೆಯಿತ್ತು ಎನ್ನುವುದು ಸ್ಪಷ್ಟಗೋಚರವಾಗುತ್ತದೆ.

ಮಳಗಿಯವರು ತಾವು ಕಂಡ, ಪರಿಚಯ ಮಾಡಿಕೊಂಡ, ಆಗಾಗ ಸಂಪರ್ಕವಿರಿಸಿ ಕೊಂಡಿದ್ದ ವ್ಯಕ್ತಿಗಳ ಬಗ್ಗೆ ತುಂಬ ಅಭಿಮಾನ, ಪ್ರೀತಿಗಳನ್ನು ಜೀವಂತವಾಗಿರಿಸಿ ಕೊಂಡಿರುತ್ತಾರೆ. ಬೇಂದ್ರೆ, ಆಲೂರು, ರಂ.ಶ್ರೀ. ಮುಗಳಿಯಂಥವರನ್ನು ಆರಾಧನಾ ಭಾವದಿಂದ ಕಾಣುತ್ತಿದ್ದರಲ್ಲದೆ, ತಮ್ಮದೇ ಆದ ರೀತಿಯಲ್ಲಿ ಅವಕಾಶ ಸಿಕ್ಕಿದಾಗಲೆಲ್ಲ ಗೌರವ ಪ್ರೀತಿ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದರು. ಉದಾಹರಣೆಗೆ, ದಿ॥ ರಂ.ಶ್ರೀ. ಮುಗಳಿಯವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಮುಗಳಿಯವರಿಗೆ ನೆನಪಿನ ಕಾಣಿಕೆಯಾಗಿ, ೧೯೩೧-೨೦೦೦ದವರೆಗೂ ಬರೆದಿದ್ದ ಕವಿತೆಗಳಲ್ಲಿ ಕೆಲವನ್ನು ಆಯ್ದು 'ಬಾಳ ದಾರಿಯಲ್ಲಿ' ಎಂಬ ಸಂಕಲನವನ್ನು ಹೊರತಂದರು. ಈ ಸಂಕಲನದಲ್ಲಿನ ಕವಿತೆಗಳೆಲ್ಲವೂ ಕಾಲಬದ್ಧ ಕವಿತೆಗಳೆಂದು ಕರೆದರು. ಕಾರಣ ಇಲ್ಲಿನ ಕವಿತೆಗಳೆಲ್ಲವೂ ಯಾವುದೋ ಒಂದೊಂದು ನಿರ್ದಿಷ್ಟ ಸಂದರ್ಭ, ಸನ್ನಿವೇಶಗಳಲ್ಲಿ ಬರೆದವುಗಳಾಗಿವೆ. ಇವುಗಳ ಹಿನ್ನೆಲೆಯನ್ನು ಮಳಗಿಯವರೇ ಸ್ವತಃ ಸಂಕಲನದ ಪ್ರಾರಂಭದಲ್ಲಿ ವಿವರಿಸಿದ್ದಾರೆ.

೩೪ ಕವಿತೆಗಳನ್ನು ಒಳಗೊಂಡ ಈ ಸಂಕಲನದಲ್ಲಿ ಸುನೀತಗಳು, ಭಾವಗೀತೆಗಳು ಇದ್ದು ವೈವಿಧ್ಯಮಯ ಅನುಭವಗಳ ಹಿನ್ನೆಲೆಯನ್ನು ಹೊಂದಿವೆ. ಮಗು, ಮೌನ ಸಪ್ತಾಹ, ಶ್ರಮದಾನ, ಪಾಪವಾಹಿನಿ, ಏನು ಬರಲೇ ಬೇಕೆ ಪ್ರಳಯಕಾಲ ಇತ್ಯಾದಿ ಕವಿತೆಗಳಲ್ಲದೆ ರವೀಂದ್ರನಾಥ ಟ್ಯಾಗೋರ್, ಜಿ.ಪಿ. ರಾಜರತ್ನಂ, ಜವಹರಲಾಲ್ ನೆಹರೂ, ತೀ.ನಂ.ಶ್ರೀ, ಮುಗಳಿ ಮೊದಲಾವರ ವ್ಯಕ್ತಿ ಚಿತ್ರಗಳೂ ಇವೆ. ಇವುಗಳಲ್ಲಿ 'ಮೌನಸಪ್ತಾಹ' ಎಂಬ ಕವಿತೆಯ ಹಿನ್ನೆಲೆ ರೋಚಕವಾಗಿದೆ. ಬೇಂದ್ರೆಯವರು ಮತ್ತು ಅವರ ಗೆಳೆಯರ ಗುಂಪಿನ ಜೊತೆಗೆ, ಒಟ್ಟು ೭ ಜನ ಸೇರಿ ೧೯೪೫-೪೭ರವರೆಗಿನ ಮೂರು ವರ್ಷ ಏಳೇಳು ದಿನಗಳ ಮೌನಸಪ್ತಾಹವನ್ನು ಮೂರು ಬೇರೆ ಬೇರೆ ಸ್ಥಳಗಳಲ್ಲಿ ಆಚರಿಸಿದರಂತೆ. ಅದರ ಅನುಭವದ್ರವ್ಯವೇ ಈ ಕವಿತೆಯ ವಸ್ತು. ಹಾಗೆಯೇ 'ಪಾಪವಾಹಿನಿ' ಮತ್ತು 'ಏನು ಬರಲೇ ಬೇಕೆ ಪ್ರಳಯ' ಕವಿತೆಗಳು ಏಶಿಯಾ ಖಂಡದ ಮೇಲೆ ಬ್ರಿಟಿಷರ ದಬ್ಬಾಳಿಕೆ ಉಲ್ಬಣಗೊಂಡಾಗಿನ ಸಂದರ್ಭಕ್ಕೆ ಬರೆದವುಗಳಂತೆ. 'ಚಿರ ಯುವಕ ಜವಹರ' ನೆಹರು ಜಯಂತಿಯ ನೆನಪಿಗಾಗಿ ಬರೆದು ಆಕಾಶವಾಣಿಯಲ್ಲಿ ಪ್ರಸಾರಗೊಂಡಿತಂತೆ.

ಇದೇ ರೀತಿಯಲ್ಲಿ ಆಲೂರರ ಬಗ್ಗೆ ತಮಗಿದ್ದ ಭಕ್ತಿ ಗೌರವಗಳನ್ನು ಸಮರ್ಪಿಸಿಕೊಳ್ಳಲು ಅವಕಾಶಕ್ಕಾಗಿ ಕಾಯುತ್ತಿದ್ದ ಮಳಗಿಯವರಿಗೆ ಅವಕಾಶವೊಂದು ಸಿಕ್ಕಿಯೇ ಸಿಕ್ಕಿತು. ಧಾರವಾಡದಲ್ಲಿ ಇದ್ದಾಗಿನಿಂದಲೂ ಮಳಗಿಯವರು ಆಕಾಶವಾಣಿ ಕಾರ್ಯಕ್ರಮಗಳನ್ನು ನೀಡುತ್ತಿದ್ದರು. ಸುಮಾರು ಮೂವತ್ತು ವರ್ಷಗಳಿಗೂ ಮೀರಿ, ನಿರಂತರವಾಗಿ ಆಕಾಶವಾಣಿಯಲ್ಲಿ ಅವರ ಭಾಷಣಗಳು, ಚಿಂತನಗಳು, ನಾಟಕಗಳು, ರೂಪಕಗಳು, ಶಬ್ದಚಿತ್ರಗಳು ಇತ್ಯಾದಿಯಾಗಿ ಹಲವಾರು ಕಾರ್ಯಕ್ರಮಗಳು ಪ್ರಸಾರಗೊಂಡವು. ಕಡೆಗೆ ಪ್ರಕಟವಾದ ರೂಪಕಗಳಲ್ಲಿ 'ಕರ್ನಾಟಕ ಕುಲಪುರೋಹಿತ ಆಲೂರು ವೆಂಕಟರಾಯರು' ಎಂಬುದೊಂದು. ಆಲೂರರ ಬಗ್ಗೆ ತಾವು ತಿಳಿದುಕೊಂಡಿದ್ದ, ಸಂಗ್ರಹಿಸಿದ್ದ ಎಲ್ಲ ವಿವರಗಳನ್ನೂ ಈ ರೂಪಕದಲ್ಲಿ ಬಳಸಿಕೊಂಡರು. 'ನಿವೇದಕ' ತಂತ್ರದ ಮೂಲಕ ಮತ್ತು ಕೆಲವು ಪಾತ್ರಗಳ ಸೃಷ್ಟಿಯ ಮೂಲಕ ಆಲೂರರ ವ್ಯಕ್ತಿತ್ವ, ಸಾಧನೆ, ಅವರ ಭಾಷಾಭಿಮಾನ, ಜೀವನ ಸಂದೇಶ, 'ಕರ್ನಾಟಕತ್ವ' ಪರಿಕಲ್ಪನೆಯ ವಿವರಗಳು, ಏಕೀಕರಣದ ಅಗತ್ಯ, ಏಕೀಕರಣ ಹೋರಾಟದ ಸ್ವರೂಪ, ಭಾಗವಹಿಸಿದ ವ್ಯಕ್ತಿಗಳು, ಸಂಸ್ಥೆಗಳು, ಸಂಘಟನೆಗಳು, ಆಲೂರರು ಕರ್ನಾಟಕದಲ್ಲಿ ಮೂಡಿಸಿದ ಜಾಗೃತಿ, ಅಂದಿನ ಕರ್ನಾಟಕದ ಸ್ಥಿತಿಗತಿ, ಇದರ ಹಿನ್ನೆಲೆಯಲ್ಲಿ ರಾಷ್ಟ್ರೀಯ ಚಳುವಳಿಯ ಸಾಂದರ್ಭಿಕ ಪ್ರಸ್ತಾಪ, ದೇಶದ, ನಾಡಿನ ರಾಜಕೀಯ ಹೋರಾಟಗಳ ಬಗ್ಗೆ ಆಲೂರರ ಚಿಂತನೆ–ಎಲ್ಲವನ್ನೂ ಈ ರೂಪಕದಲ್ಲಿ ಸಮಗ್ರವಾಗಿ ಬಿಂಬಿಸಿದ್ದಾರೆ. ಆಲೂರರೇ ಕೇಂದ್ರ ಪಾತ್ರವಾಗಿರುವುದರಿಂದ, ತಮ್ಮ ಅನುಭವಗಳನ್ನು ಸ್ವತಃ ಹೇಳಿಕೊಂಡಂತೆ ಕಾಣಿಸಿದ್ದಾರೆ. ನಿವೇದಕ ನಾಟಕದ ಕ್ರಿಯೆಯ ಮುಂದುವರಿಕೆಗೆ ನಡೆದ ಸಂಗತಿಗಳನ್ನು ಪ್ರಸ್ತಾಪಿಸಿ, ಆಲೂರರ ಬದುಕಿನಲ್ಲಿ ತಿರುವುಗಳನ್ನು ಸೂಚಿಸುತ್ತಾರೆ. ಆಲೂರರ ನೇರ ಪ್ರವೇಶ, ಸಂಭಾಷಣೆಗಳಿಂದಲೂ ನಿವೇದಕನ ಸೂಚನೆಗಳಿಂದಲೂ ಆಲೂರರ ಸಮಗ್ರ

ಚಿತ್ರ ಕೇಳುಗರಿಗೆ ಸಾಧ್ಯವಾಗುತ್ತದೆ. ಈ ರೂಪಕದ ಜೊತೆಗೆ ಇನ್ನೂ ಕೆಲವು ರೂಪಕಗಳನ್ನು ಶಬ್ದ ಚಿತ್ರಗಳನ್ನು ಸೇರಿಸಿ, ಸಂಕಲನವೊಂದನ್ನು ಪ್ರಕಟಿಸಿದ್ದಾರೆ. ಈ ಸಂಕಲನದಲ್ಲಿ ಚಾಳುಕ್ಯ ಸಾಮ್ರಾಟ ಪರಮೇಶ್ವರ ಪುಲಕೇಶಿಯ ವಿಜಯೋತ್ಸವ, ದಾನಚಿಂತಾಮಣಿ ಅತ್ತಿಮಬ್ಬೆ, ಸಂಗೊಳ್ಳಿ ರಾಯಣ್ಣ, ನರಗುಂದದ ಬಂಡಾಯ ಇತ್ಯಾದಿ ಐತಿಹಾಸಿಕ ವ್ಯಕ್ತಿ ಆಧಾರಿತ ರೂಪಕಗಳೂ, ವ್ಯಕ್ತಿ ಕೇಂದ್ರಿತ ರೂಪಕಗಳೂ, ಸಾಮಾಜಿಕ ರೂಪಕಗಳೂ, ಶಿಶುನಾಳ ಶರೀಫ ಮೊದಲಾದ ಶಬ್ದ ಚಿತ್ರಗಳೂ ಇವೆ.

ಮಳಗಿಯವರಿಗೆ ಮೂವತ್ತರ ದಶಕದಿಂದ ಇತ್ತೀಚಿನವರೆಗಿನ ಕನ್ನಡ ರಂಗಭೂಮಿಯ ವಿಕಾಸದ ಅರಿವಿದೆ. ಕಾಲಕಾಲಕ್ಕೆ ರಂಗಭೂಮಿಯಲ್ಲಿ ಆಗತ್ತಿರುವ ಸ್ಥಿತ್ಯಂತರಗಳನ್ನು ಗಮನಿಸಿದ್ದಾರೆ. ಜಾನಪದ ರಂಗಭೂಮಿ, ವೃತ್ತಿರಂಗಭೂಮಿ, ಹವ್ಯಾಸಿ ರಂಗಭೂಮಿಯ ಸ್ವರೂಪವನ್ನು ಬಲ್ಲವರಾಗಿದ್ದಾರೆ. ಈ ಬಾನುಲಿ ರೂಪಕ ಸಂಕಲನದ ಪ್ರಸ್ತಾವನೆಯಲ್ಲಿ ೧೮೬೧ ರಿಂದ ನಾಟಕ ಸಾಹಿತ್ಯರಚನೆಯ ಇತಿಹಾಸವನ್ನು ಸ್ಥೂಲವಾಗಿ ಪ್ರಸ್ತಾಪಿಸಿದ್ದಾರೆ. ಮೊದಲಿಗೆ ನಾಟಕಗಳು ಭಾಷಾಂತರ ರೂಪಾಂತರಗಳಾಗಿ ಬಂದದ್ದನ್ನು ಪ್ರಸ್ತಾಪಿಸಿ, ನಂತರ ಹಂತಹಂತವಾಗಿ ನಾಟಕಗಳ ರಚನೆಯಲ್ಲಿ, ವಸ್ತು, ಶೈಲಿಯಲ್ಲಿ ಆದ ಬದಲಾವಣೆಗಳನ್ನೂ ಗುರುತಿಸುತ್ತಾರೆ. ಆ ಕಾಲದ ನಾಟಕಕಾರರಾದ ಶಾಂತಕವಿಗಳು, ಬೆಳ್ಳಾವೆ ನರಹರಿಶಾಸ್ತ್ರಿಗಳು, ನಂಜನಗೂಡು ಶ್ರೀಕಂಠಶಾಸ್ತ್ರಿಗಳು, ಗರೂಡ ಸದಾಶಿವರಾಯರು, ನಂತರದ ಬಿ.ಎಂ.ಶ್ರೀ, ಅದಾದನಂತರ ಸಾಮಾಜಿಕ ಸ್ವತಂತ್ರ ನಾಟಕ ರಚನೆಯಲ್ಲಿ ಕ್ರಾಂತಿ ಎಬ್ಬಿಸಿದ ಟಿ.ಪಿ. ಕೈಲಾಸಂ, ಶ್ರೀರಂತ, ಸಾಹಿತಿಗಳಾಗಿದ್ದೂ ನಾಟಕ ರಚನೆಯಲ್ಲೂ ತೊಡಗಿಸಿಕೊಂಡು ಉತ್ತಮ ನಾಕಟಗಳನ್ನು ಕನ್ನಡಕ್ಕೆ ನೀಡಿದ ಕಾರಂತ, ಕುವೆಂಪು, ಡಿ.ವಿ.ಜಿ., ಬೇಂದ್ರೆ, ಎಂ.ಆರ್. ಶ್ರೀ., ಪುತಿನ., ವಿ.ಸೀ., ವಿನಾಯಕ, ರಸಿಕರಂಗ ಹೀಗೆ ಒಂದು ದೊಡ್ಡ ಪಟ್ಟಿಯನ್ನೇ ನೀಡಿದ್ದಾರೆ. ವೈವಿಧ್ಯಮಯವಾಗಿಯೂ ಸಮರ್ಥವಾಗಿ ಬರೆಯಬಲ್ಲ ಮಳಗಿಯವರು ಸೃಜನಶೀಲತ್ವ, ವಿದ್ವತ್ತು, ಮೇಷ್ಟ್ರತನಗಳನ್ನು ಮೈಗೂಡಿಸಿಕೊಂಡಿದ್ದರೂ, ಯಾಕೋ ಮೇಷ್ಟ್ರತನಕ್ಕೇ ಮಹತ್ವ ನೀಡಿ ನಿವೃತ್ತಿಯ ತನಕವೂ ನಂತರವೂ ಪೂರ್ಣ ಪ್ರಮಾಣದಲ್ಲಿ ಸೇವೆ ಸಲ್ಲಿಸಿದವರು, ಅದ್ಯಾಕೋ ಉಳಿದೆರಡು ಸಾಮರ್ಥ್ಯಗಳನ್ನು ಪೂರ್ಣ ಪ್ರಮಾಣದಲ್ಲಿ ದುಡಿಸಿಕೊಳ್ಳದೆ ಹೋದದ್ದು ನಿಜವಾಗಿಯೂ ಒಂದು ವಿಷಾದದ ಸಂಗತಿಯೇ ! ನೂರಕ್ಕೂ ಮೀರಿದ ಸಂಖ್ಯೆಯಲ್ಲಿ ಕವಿತೆಗಳನ್ನು ಬರೆದಿದ್ದಾರೆ ; ಪ್ರಸಾರ ಮಾಧ್ಯಮಕ್ಕಾಗಿ ರೂಪಕಗಳನ್ನು ಬರೆದಿದ್ದಾರೆ; ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಛಂದಸ್ಸು, ವ್ಯಾಕರಣಗಳನ್ನು ಕುರಿತು ಗ್ರಂಥಗಳನ್ನು ರಚಿಸಿದ್ದಾರೆ. ಅಲ್ಲದೆ ಹಲವಾರು ಗ್ರಂಥಗಳನ್ನು ಸಂಪಾದಿಸಿದ್ದಾರೆ. ಇಷ್ಟೆಲ್ಲದರ ಜೊತೆಗೆ ಬಿಡಿ ಲೇಖನಗಳೂ, ಸಂಪಾದಿತ ಕೃತಿಗಳೂ ಇವೆಯಾದರೂ ಸಾರಸ್ವತ ಜಗತ್ತು ಈ ಹಿರಿಯರ ಸಾಧನೆಗಳನ್ನು ಗುರುತಿಸಿ ಗೌರವಿಸುವ ಸೌಜನ್ಯವನ್ನು ತೋರದೆ, ಕೇವಲ ಅವರ ಮೇಷ್ಟ್ರತನವನ್ನಷ್ಟೇ ಅವರಿಗೆ ಅಂಟಿಸಿದ್ದಾರೆ. ಆದರೆ ಮಳಗಿಯವರು ಇದ್ಯಾವುದನ್ನೂ ಮನಸ್ಸಿಗೆ ತಂದುಕೊಳ್ಳುವುದಿಲ್ಲ. ಅವರ ಆಧ್ಯಾತ್ಮಿಕ ಮನಸ್ಸಿಗೆ ಇವೆಲ್ಲ ಅಂಥ ಮಹತ್ವದ್ದೆನಿಸುವುದಿಲ್ಲ. ತಾವು ಬದುಕುವ ಅರ್ಥಪೂರ್ಣವಾದ ಬದುಕೊಂದೇ

ಮುಖ್ಯ. ಬದುಕಿನ ಹಾದಿಯಲ್ಲಿ ಸಂಧಿಸಿದ ಮಹಾನ್ ಚೇತನಗಳ ಸಂಪರ್ಕ, ಒಡನಾಟ, ಅವರ ಮೆಚ್ಚುಗೆ, ಅವರ ಆಶೀರ್ವಾದ ಅನುಗ್ರಹಗಳೇ ತಮ್ಮ ಬದುಕಿನ ಅಮೂಲ್ಯ ನಿಧಿಯೆಂದು ಭಾವಿಸುವ ಭಾವಸ್ಥಿತಿಯಲ್ಲಿರುವ ಮಳಗಿಯವರು ೧೯೯೫ರಲ್ಲಿ ಪತ್ನಿವಿಯೋಗವನ್ನು ಅನುಭವಿಸಿದರೂ, ಮಕ್ಕಳು, ಮೊಮ್ಮಕ್ಕಳ ಪ್ರೀತಿಯ ಆರೈಕೆಯಲ್ಲಿ ನೆಮ್ಮದಿಯ, ಸಂತೃಪ್ತ ಬದುಕನ್ನು ಬದುಕಿ ದಿನಾಂಕ : ಡಿಸೆಂಬರ್ ೨೩, ೨೦೧೪ರಂದು ಇಹಲೋಕವನ್ನು ತ್ಯಜಿಸಿದರು.

ಈ ಹಿರಿಯ ಚೇತನದ ಆದರ್ಶಗಳು, ವೃತ್ತಿ ಬದ್ಧತೆಗಳು, ಸ್ನೇಹಪೂರ್ಣ ವ್ಯಕ್ತಿತ್ವ, ಅವರು ಗುರುಹಿರಿಯರ ಬಗ್ಗೆ, ನಾಡು-ನುಡಿ ಸಂಸ್ಕೃತಿಗಳ ಬಗ್ಗೆ ಇರಿಸಿಕೊಂಡಿದ್ದ ಕಾಳಜಿಗಳು, ಕ್ರಿಯಾಶೀಲ ಬದುಕು-ಇವೆಲ್ಲವೂ ಅವರ ಮುಂದಿನ ಪೀಳಿಗೆಯ ನಮ್ಮಂಥವರಿಗೆ ಪ್ರೇರಣೆಯಾಗಲಿ, ದಾರಿ ದೀಪವಾಗಲಿ ಎಂದು ಆಶಿಸುತ್ತೇನೆ.

○

# ೨. ಅನುಬಂಧಗಳು

## ಅನುಬಂಧ–೧

### ಪ್ರೊ. ಎಸ್.ಆರ್. ಮಳಗಿ

**ನಾ**ನು ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗಕ್ಕೆ ಸ್ನಾತಕೋತ್ತರ ಸಂಶೋಧನ ಸಹಾಯಕನಾಗಿ ಸೇರಿದಾಗ (೧೯೬೭) ಶ್ರೀ ಎಸ್.ಆರ್. ಮಳಗಿ ಅವರು ಸಹೋದ್ಯೋಗಿಗಳಾಗಿದ್ದರು. ಸೆಂಟ್ರಲ್ ಕಾಲೇಜಿನ ಕಛೇರಿಗೆ ಸೇರಿದಂತೆ ಇಂಗ್ಲಿಷ್ ವಿಭಾಗ ಹಾಗೂ ಕನ್ನಡ ವಿಭಾಗಗಳಿದ್ದವು. ಕನ್ನಡ ವಿಭಾಗ ಒಂದು ಪುಟ್ಟ ಕೊಠಡಿಯಲ್ಲಿ ಕೆಲಸ ಮಾಡುತ್ತಿತ್ತು. ಶ್ರೀ ಎಸ್.ಆರ್. ಮಳಗಿಯವರು ಮೊದಲಿಗೆ ಸರ್ಕಾರಿ ಕಾಲೇಜಿನಲ್ಲಿ ಸೇವೆ ಸಲ್ಲಿಸುತ್ತಿದ್ದರು. ಬೆಂಗಳೂರು ವಿಶ್ವವಿದ್ಯಾಲಯ ಸ್ಥಾಪನೆಯಾದ ಹೊಸತರಲ್ಲಿ ಅಲೋಕೇಟಿವ್ ಸಿಬ್ಬಂದಿಯಾಗಿ ಅವರು ವಿಶ್ವವಿದ್ಯಾಲಯದ ಸೇವೆಯಲ್ಲಿಯೇ ಉಳಿಯಲು ತೀರ್ಮಾನಿಸಿದರು. ನಾನು ನ್ಯಾಷನಲ್ ಕಾಲೇಜಿನಿಂದ ಬೆಂಗಳೂರು ವಿಶ್ವವಿದ್ಯಾಲಯದ ಸೇವೆಗೆ ಬಂದಾಗ ಶ್ರೀ ಎಸ್.ಆರ್. ಮಳಗಿಯವರು ಮುಖ್ಯಸ್ಥರಾಗಿದ್ದರು. ಕನ್ನಡ ವಿಭಾಗಕ್ಕೆ ನನ್ನನ್ನು ಅವರು ಬರಮಾಡಿಕೊಂಡ ದೃಶ್ಯ ಇಂದಿಗೂ ಕಣ್ಣಿಗೆ ಕಟ್ಟಿದಂತಿದೆ. ಆ ಪ್ರೀತಿ ವಿಶ್ವಾಸ ಹೃದಯದಿಂದ ಬಂದದ್ದು.

ಶ್ರೀ ಎಸ್.ಆರ್. ಮಳಗಿಯವರ ಪುಟಿಯುವ ಉತ್ಸಾಹವನ್ನು ನಾನು ಅಂದೂ ಕಂಡಿದ್ದೆ. ಇಂದೂ ಕಂಡಿರುವೆನು. ಅದು ಬಾಡದ ಉತ್ಸಾಹ. ಅವರು ತಮ್ಮ ಧಾರವಾಡ–ಬೆಂಗಳೂರುಗಳ ಮಧುರ ಪಾಕವಾಗಿ ತಮ್ಮ ಆಡುಭಾಷೆಗೆ ಬೆಂಗಳೂರು ಕನ್ನಡವನ್ನು ಕಸಿಮಾಡಿ ತಮ್ಮದೇ ಧಾಟಿಯಲ್ಲಿ ಮಾತನಾಡುವಾಗ ಅಂಗಿಕ ಅಭಿನಯ ಮಾಡುತ್ತಾ, ಕಣ್ಣಿನಲ್ಲಿ ಮಿಂಚುವ ಸಂತೋಷವನ್ನು ತುಳುಕಿಸುತ್ತಾ ವಿಶಿಷ್ಟವಾಗಿ ನನಗೆ ಅಂದೂ ಇಂದೂ ಬದಲಾಗದ ವ್ಯಕ್ತಿತ್ವವಾಗಿ ಕಾಣಿಸಿರುವರು.

ಇಂದಿಗೂ ಅವರ ಪಂಚೇಂದ್ರಿಯಗಳು ಚೆನ್ನಾಗಿಯೇ ವ್ಯವಹರಿಸುತ್ತಿವೆ. ಕೆಲಸದಲ್ಲಿ ಅಚ್ಚುಕಟ್ಟು ಅವರ ವ್ಯಕ್ತಿ ವಿಶಿಷ್ಟಗುಣ. ಸಮಯ ನಿಷ್ಠೆ ಅವರ ಇನ್ನೊಂದು ಮುಖ್ಯಗುಣ. ನಾನು ಅವರ ಲಕ್ಷ್ಮೀಶನ 'ಜೈಮಿನಿಭಾರತ ಸಂಗ್ರಹ' ಬಹಳ ಹಿಂದೆಯೇ ಓದಿದ್ದೆ. ಅವರ ಸಂಗ್ರಹಗುಣವನ್ನೂ ಮೆಚ್ಚಿದ್ದೆ. ಅವರು ಬೆಂಗಳೂರು ವಿಶ್ವವಿದ್ಯಾಲಯ ವ್ಯಾಪ್ತಿಯ ಕನ್ನಡ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಕೇಶಿರಾಜನ ಶಬ್ದಮಣಿ ದರ್ಪಣ ಸಂಗ್ರಹವನ್ನು ಸಿದ್ಧಪಡಿಸಿಕೊಟ್ಟಿದ್ದರು. ಅಲ್ಲಿ ವ್ಯಾಕರಣದ ಮೇಲಿನ ಅವರ ಆಳವಾದ ಓದು, ಆಸಕ್ತಿ, ಹಳಗನ್ನಡ ವ್ಯಾಕರಣವನ್ನು ವಿದ್ಯಾರ್ಥಿಗಳಿಗೆ ತಿಳಿಹೇಳುವ ವಿಧಾನ ನನಗೆ ಬಹಳ

ಹಿಡಿಸಿದ್ದಿತು. ಬೆಂಗಳೂರು ವಿಶ್ವವಿದ್ಯಾಲಯದ ಅಂಚೆ ತೆರಪಿನ ಶಿಕ್ಷಣ ವಿಭಾಗದವರು ಶ್ರೀ ಎಸ್.ಆರ್. ಮಳಗಿಯವರ ಸೇವೆಯನ್ನು ವಿಶೇಷವಾಗಿ ಬಳಸಿಕೊಂಡಿರುವರು. ವಿದ್ಯಾರ್ಥಿಗಳ ಓದಿಗೆ ಅನುಕೂಲವಾಗುವ ರೀತಿಯಲ್ಲಿ ಅವರು ಹಳಗನ್ನಡ ಹಾಗೂ ಮಧ್ಯಕಾಲೀನ ಕವಿಗಳ ಬಗೆಗೆ ಲೇಖನ ಬರೆದುಕೊಟ್ಟಿರುವರು. ಗ್ರಂಥ ಸಂಪಾದನೆ ಕುರಿತು ಎಂ.ಎ. ವಿದ್ಯಾರ್ಥಿಗಳಿಗೆ ಅವರು ಬರೆದಿರುವ ನೋಟ್ಸ್ ಓದಿದ ನನಗೆ ಅವರ ಆಳವಾದ ವ್ಯಾಸಂಗ ಹಾಗೂ ವಿದ್ವತ್ತಿನ ಬಗೆಗೆ ಗೌರವ ಮೂಡಿತು.

ನಾನು ಅವರನ್ನು ಹಿಂದೆ ವಾಸವಿದ್ದ ರಾಜಾಜಿನಗರದ ಮೊದಲನೆ ಹಂತದ ಮನೆಯ ಉಪ್ಪರಿಗೆಯಲ್ಲಿ ಹಲವಾರು ಬಾರಿ ಭೇಟಿ ಮಾಡಿರುವೆನು. ಅವರ ಮುಗ್ಧ ಸ್ನಿಗ್ಧ ನಗೆ, ಆತ್ಮೀಯವಾಗಿ ಮಾತನಾಡಿಸುವ ಧಾಟಿ ನನಗೆ ಮರೆಯಲಾಗದ್ದು. ಅವರು ನನ್ನ ಪಿಎಚ್.ಡಿ. ಮಾರ್ಗದರ್ಶಿಗಳಾಗಿದ್ದ ಡಾ. ರಂ.ಶ್ರೀ. ಮುಗಳಿಯವರ ಆತ್ಮೀಯ ಮಿತ್ರರು. ಈ ಬಾಂಧವ್ಯ ಶ್ರೀ ಎಸ್.ಆರ್. ಮಳಗಿಯವರು ನನ್ನನ್ನು ಪ್ರೀತಿಸಲು, ನಾನು ಅವರನ್ನು ಗುರುಸ್ಥಾನದಲ್ಲಿಟ್ಟು ಗೌರವಿಸಲು ಕಾರಣವಾಗಿರಬಹುದು.

ಕಡೆಯದಾಗಿ ಒಂದು ಮಾತು. ಕನ್ನಡ ವಿದ್ವದ್ ಲೋಕ ಅವರನ್ನು ಮರೆತುಬಿಟ್ಟಿದೆ. ಮಿನುಗುವುದೆಲ್ಲ ಚಿನ್ನವಲ್ಲ ನಿಜ. ಆದರೆ, ನಮ್ಮ ಸಾಹಿತ್ಯ ಪರಿಸರದಲ್ಲಿ ಚಿನ್ನವಲ್ಲದವೇ ಹೆಚ್ಚು ಮಿನುಗುತ್ತಿವೆ ; ಪ್ರಚಾರ ಗುರುತಿಸುವಲ್ಲಿ ಕರುಡುಗಣ್ಣಾಗಿದೆ. ಇದು ಬೇಸರದ ಸಂಗತಿ.

–ಡಾ. ಎಸ್. ವಿದ್ಯಾಶಂಕರ್

## ಅನುಬಂಧ – ೨

## ಪ್ರೊ. ಎಸ್.ಆರ್. ಮಳಗಿ : ಬದುಕು–ಬರಹ

### ಜೀವನ ವೃತ್ತ

ಪೂರ್ಣ ಹೆಸರು : ಸೇತುರಾಮ ರಾಘವೇಂದ್ರ ಮಳಗಿ (ಎಸ್.ಆರ್. ಮಳಗಿ); ಜನ್ಮಸ್ಥಳ : ವಿಜಾಪುರ ಜಿಲ್ಲೆಯ ಖ್ಯಾಡವೆಂಬ ಗ್ರಾಮ ; ಪದವಿ : ಕನ್ನಡ–ಸಂಸ್ಕೃತ ಎಂ.ಎ. (೧೯೩೭), ಬಿ.ಟಿ. (೧೯೪೦) ಮುಂಬಯಿ ವಿಶ್ವವಿದ್ಯಾಲಯ.

### ಅಧ್ಯಾಪಕ ವೃತ್ತಿ

ನ್ಯೂ ಇಂಗ್ಲಿಷ್ ಹೈಸ್ಕೂಲು, ಹುಬ್ಬಳ್ಳಿ (೧೯೩೮–೪೨); ಕನ್ನಡ ಲೆಕ್ಚರರ್ ಹಾಗೂ ರೀಡರ್–ಕರ್ನಾಟಕ ಕಾಲೇಜು, ಧಾರವಾಡ (೧೯೪೭–೬೧); ಕನ್ನಡ ರೀಡರ್, ಸೆಂಟ್ರಲ್ ಕಾಲೇಜ್ ಹಾಗೂ ಬೆಂಗಳೂರು ವಿಶ್ವವಿದ್ಯಾಲಯ (೧೯೬೧–೬೯) ; ನಿವೃತ್ತಿ ನಂತರ ಪ್ರಾಂಶುಪಾಲರು, ಲಾಲ್ ಬಹದ್ದೂರ್ ಶಾಸ್ತ್ರಿ ಕಾಲೇಜ್, ಸಾಗರ (ಶಿವಮೊಗ್ಗ) (೧೯೬೯–೭೧); ಪ್ರಾಧ್ಯಾಪಕ ; ಸೇಂಟ್‌ಜಾನ್ಸ್ ಜ್ಯೂನಿಯರ್ ಕಾಲೇಜ್, ಬೆಂಗಳೂರು (೧೯೭೧–೭೩); ಯುಜಿಸಿ. ಪ್ರಾಧ್ಯಾಪಕ–ಬೆಂಗಳೂರು (೧೯೭೫–೭೬).

**ಸಾಹಿತ್ಯ ಕೃತಿಗಳು : (ಪ್ರಕಟಿತ)**

ಛಂದೋದರ್ಶನ (ಬ್ರಹ್ಮರ್ಷಿ ದೈವರಾತ ಕೃತ) ವೈದಿಕ ಸಂಸ್ಕೃತದಿಂದ ಇಂಗ್ಲಿಷ್‌ಗೆ ಅನುವಾದ – ಭಾರತೀಯ ವಿದ್ಯಾಭವನ ಪ್ರಕಟನೆ–೧೯೬೮ ; ಬಿಡುಗಡೆಯ ಬೆಳ್ಳಿ– ಸ್ವಾತಂತ್ರ್ಯ ಸಂಗ್ರಾಮ ಚರಿತ್ರೆ, ಹಿಮಾಂಶು ಪ್ರಕಾಶನ–೧೯೭೨ ; ವಾಕ್ಯ ಮಾಣಿಕ್ಯ ಕೋಶ ; ಹರಿಶ್ಚಂದ್ರ ಕಾವ್ಯ ಕಥೆ ; ಕನ್ನಡ ಕವಿ ಕಾವ್ಯ ಪರಿಚಯ (ಇಂಗ್ಲಿಷಿನಲ್ಲಿ) (ಕೇಂದ್ರ ಸಾಹಿತ್ಯ ಅಕಾಡೆಮಿ ಎನ್‌ಸೈಕ್ಲೋಪಿಡಿಯಾ ಸಂಪುಟಕ್ಕಾಗಿ ಬರೆದುದು) ; ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ – ಮರಾಠಿ ಜ್ಞಾನಕೋಶಕ್ಕಾಗಿ ಬರೆದುದು (ಡಾ. ಗೌರೀಶ ಕಾಯ್ಕಿಣಿ ಅವರಿಂದ ಮರಾಠಿಗೆ ಅನುವಾದಿತ) ; ಕನ್ನಡ ಎಂ.ಎ. ವರ್ಗದ ಅಧ್ಯಯನಕ್ಕೋಸುಗ ಎಂಟು ಸಂಪುಟಗಳು : ಅ) ಸಾಹಿತ್ಯ ವಿಮರ್ಶೆ ಆ) ವ್ಯಾಕರಣ ಇ) ಛಂದಸ್ಸು ಈ) ಭಾಷಾಶಾಸ್ತ್ರ ಉ) ಕಾವ್ಯ ಮೀಮಾಂಸೆ ಇತ್ಯಾದಿ. ಕನ್ನಡ ಗ್ರಂಥ ಸಂಪಾದನಾಶಾಸ್ತ್ರ, ಬೆಂಗಳೂರು ವಿ.ವಿ. ಅಂಚೆ ತೆರಪಿನ ಯೋಜನೆಯನ್ವಯ; ವೀರಮಾತೆ ಗುತ್ತಲ ಗುರುಪಾದ ತಾಯಿ (ಜೀವನ ಚರಿತ್ರೆ) ; ಶ್ರೀ ಅರವಿಂದ ಪ್ರವೇಶಿಕೆ ; ಬಾಳದಾರಿಯಲ್ಲಿ (ಕವನ ಸಂಕಲನ ೨೦೦೫) ; ಕನ್ನಡ ಛಂದಸ್ಸು ಶಾಸ್ತ್ರ (ಕನ್ನಡ ಸಾಹಿತ್ಯ ಪರಿಷತ್ ಪ್ರಕಟಣೆ ೨೦೦೫) ; ಚಳುಕ್ಯ ಸಾಮ್ರಾಟ ಪರಮೇಶ್ವರ ಪುಲಕೇಶಿಯ ವಿಯೋತ್ಸವ, (ಆಕಾಶವಾಣಿಗಾಗಿ ಬರೆದ ನಾಟಕ–ರೂಪಕ–ಶಬ್ದ ಚಿತ್ರಗಳ ಸಂಕಲನ).

**ಸಂಪಾದಿತ ಕೃತಿಗಳು**

ಕೇಶಿರಾಜನ ಶಬ್ದ ಮಣಿದರ್ಪಣ ಸಂಗ್ರಹ–೧೯೭೦; ಕವಿ ಕಾವ್ಯದರ್ಶನ– ೧೯೭೦; ಇಮ್ಮಾವು (ಕವನ ಸಂಗ್ರಹ – ವಸಂತ ಕಟ್ಟಿ); ಬಾಳ ನಂದನ – ಕವನ ಸಂಗ್ರಹ – ಪುಲಕೇಶಿ ; ನುಡಿ ಸೋದರ (ಕವನ ಸಂಗ್ರಹ – ಪುಲಕೇಶಿ); ಆಡಿದ ನಾಟಕಗಳು (ನಾಮಗಂ) ; ಸೃಜನಶೀಲ ಪ್ರತಿಭೆ – ವ್ಯಕ್ತಿ ಚಿತ್ರಣ – ಮಧು ಉಪಾಧ್ಯಾಯ; ವಂಶವೃಕ್ಷ, ಭೃಂಗನಾದ (ಕವನ ಸಂಕಲನಗಳು, ೧೯೫೪, ೧೯೫೯).

**ಪ್ರಕಟಿತ ಬಿಡಿ ಲೇಖನಗಳು, ಚಿಂತನೆಗಳು ಇತ್ಯಾದಿ**

ಸಾಹಿತ್ಯಕ, ಶೈಕ್ಷಣಿಕ, ಸಾಂಸ್ಕೃತಿಕ, ಆಧ್ಯಾತ್ಮಿಕ ಪ್ರಬಂಧಗಳು, ವ್ಯಕ್ತಿ ಚಿತ್ರಗಳು, ಬಾನುಲಿ ಬಿತ್ತರಣೆಗಳು ; ಭಾಷಣಗಳು, ರೂಪಕಗಳು, ಪಾಂಡಿಚೇರಿಯ ಶ್ರೀ ಅರವಿಂದ ಸೊಸೈಟಿಯ ಅಖಿಲ ಭಾರತ ಪತ್ರಿಕೆಯ ಸಂಪಾದಕೀಯಗಳು (ಪ್ರಧಾನ ಸಂಪಾದಕ, ೧೯೭೧–೧೯೯೬).

ಹೀಗೆ ಇಷ್ಟೊಂದೆಲ್ಲ ಬರೆದ ಮಳಗಿಯವರಿಗೆ ಅವರ ಸಾಧನೆಯನ್ನು ಗುರುತಿಸಿ ಸಂಸ್ಥೆ ಸರಕಾರಗಳು ಪ್ರಶಸ್ತಿ, ಪುರಸ್ಕಾರ ನೀಡಿ ಗೌರವಿಸಿವೆ. ಅವರ ಅನೇಕ ಲೇಖನಗಳಿಗೆ ಬಹುಮಾನಗಳು ಬಂದಿವೆ. ೧೯೪೦ರಲ್ಲಿ URTH ಪ್ರಶಸ್ತಿ, ೧೯೯೧ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ಹುಯಿಲಗೋಳ ನಾರಾಯಣರಾವ್ ಪ್ರಶಸ್ತಿ, ರಾಜಾಜಿನಗರ ಸಾ.ಸ.ದ ಅಧ್ಯಕ್ಷತೆಯ ಗೌರವ–ಅವುಗಳಲ್ಲಿ ಮುಖ್ಯವಾದವು.

(ಪ್ರೊ. ಮಳಗಿಯವರ ಬಗ್ಗೆ ಇಷ್ಟರಮಟ್ಟಿಗಾದರೂ ಬರೆಯಲು ಸಾಧ್ಯವಾದದ್ದು ಹಿರಿಯ ಕವಿಗಳೂ ಪ್ರೊ. ಮಳಗಿಯವರ ವಿದ್ಯಾರ್ಥಿಗಳೂ ಆಗಿದ್ದ ಶ್ರೀ ಚೆನ್ನವೀರ ಕಣವಿ ಮತ್ತು ಸಹೋದ್ಯೋಗಿಗಳಾಗಿದ್ದ ಡಾ. ಎಸ್. ವಿದ್ಯಾಶಂಕರ್, ಡಾ. ಹಂಪನಾ., ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ – ಇವರು ಒದಗಿಸಿದ ಮಾಹಿತಿಗಳಿಂದ. ಹಾಗೆಯೇ ಶ್ರೀ ಚ.ಹ. ರಘುನಾಥರ ಮತ್ತು ಪ್ರೊ. ಮಳಗಿಯವರೇ ಗೆಳೆಯ ಜೋಷಿ ಅವರ ಬಗೆಗೆ ಬರೆದ ಲೇಖನಗಳಿಂದ; ಇವರೆಲ್ಲರಿಗೂ ನಾನು ಕೃತಜ್ಞಳಾಗಿದ್ದೇನೆ.)

○

## ೩. ಪ್ರೊ. ಮಳಗಿಯವರ ಕೆಲವು ಕೃತಿಗಳ ಸಂಕ್ಷಿಪ್ತ ಪರಿಚಯ

**ಪ್ರೊ.** ಮಳಗಿಯವರು ಅಧ್ಯಾಪನ ವೃತ್ತಿಗೇ ತಮ್ಮನ್ನು ಒಂದು ತಪಸ್ಸಿನಂತೆ ತೆತ್ತುಕೊಂಡಿದ್ದೇ ಅಲ್ಲದೆ ವಿದ್ಯಾರ್ಥಿಗಳ ಅಧ್ಯಯನಕ್ಕೆ, ಅಭ್ಯಾಸಕ್ಕೇ ಹೆಚ್ಚು ಕಾಳಜಿ ತೋರಿದ್ದರಿಂದ ಮತ್ತು ಅರಬಿಂದರ ತತ್ವದರ್ಶನಗಳಿಗೆ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡಿದ್ದ ಕಾರಣ, ಆಯಾ ಕ್ಷೇತ್ರ ಸಂಬಂಧವಾದ ಬರವಣಿಗೆಗೇ ಹೆಚ್ಚು ಪ್ರಾಶಸ್ತ್ಯವನ್ನು ನೀಡಿದ್ದರಿಂದ ಸೃಜನಶೀಲ ಕೃತಿಗಳ ಸಂಖ್ಯೆ ಕೇವಲ ಬೆರಳೆಣಿಕೆಯಷ್ಟಕ್ಕೇ ಸೀಮಿತಗೊಂಡವು. ಅವರು ಬರೆದ ಕೆಲವೇ ಕೃತಿಗಳಾದರೂ ಮನಸ್ಸು ಮಾಡಿದ್ದರೆ ಕಾವ್ಯ ನಾಟಕಗಳ ರಚನೆಯ ಅಪಾರ ಸಾಮರ್ಥ್ಯವನ್ನು ಬಿಂಬಿಸುತ್ತವೆ. ವ್ಯಾಕರಣ, ಛಂದಸ್ಸು, ಕಾವ್ಯ ಮೀಮಾಂಸೆ, ಭಾಷಾಶಾಸ್ತ್ರ, ಸಂಪಾದನಾ ಶಾಸ್ತ್ರ ಕೃತಿಗಳು ಅಲಭ್ಯವಾಗಿರುವುದು ನಿಜವಾಗಿಯೂ ದುರಂತದ ಸಂಗತಿಯಾಗಿದೆ. ಮಳಗಿಯವರಿಗೆ ಇಂಗ್ಲಿಷ್ ಮತ್ತು ಕನ್ನಡ ಭಷೆಗಳೆರಡರಲ್ಲೂ ಸಾಕಷ್ಟು ಪ್ರೌಢಿಮೆ, ಪ್ರಭುತ್ವಗಳು ಇದ್ದುದರಿಂದಲೇ ಛಂದೋದರ್ಶನ, ಕವಿ–ಕಾವ್ಯ ಪರಿಚಯ ಕೃತಿಗಳನ್ನು ಇಂಗ್ಲಿಷಿನಲ್ಲಿ ಬರೆದಿದ್ದಾರೆ. ಸ್ವತಃ ಕೃತಿ ರಚನೆಯ ಜೊತೆಗೆ ಕೃತಿಸಂಪಾದನೆ, ಪತ್ರಿಕಾ ಸಂಪಾದನೆಯ ಕಾರ್ಯಗಳನ್ನು ನಿರ್ವಹಿಸಿದ್ದಾರೆ. ಅಲಭ್ಯ ಕೃತಿಗಳನ್ನು ಹೊರತುಪಡಿಸಿ ಲಭ್ಯವಾದ ಒಂದೆರಡು ಕೃತಿಗಳನ್ನು ಪರಿಚಯಿಸುವಷ್ಟಕ್ಕೇ ತೃಪ್ತಿಪಡಬೇಕಾಗಿದೆ.

### ಚಳುಕ್ಯ ಸಾಮ್ರಾಟ ಪರಮೇಶ್ವರ ಪುಲಿಕೇಶಿಯ ವಿಜಯೋತ್ಸವ

ಈ ಕೃತಿ ಆಕಾಶವಾಣಿ ಪ್ರಸಾರಕ್ಕಾಗಿ ಬರೆದ ಹತ್ತು ಬಾನುಲಿ ನಾಟಕ–ರೂಪಕ–ಶಬ್ದಚಿತ್ರಗಳ ಸಂಕಲನವಾಗಿದ್ದು, ಇದರಲ್ಲಿ ಐತಿಹಾಸಿಕ, ಕಾಲ್ಪನಿಕ–ಸಾಂಸ್ಕೃತಿಕ ಕಥಾನಕಗಳನ್ನು ಒಳಗೊಂಡಿದೆ. ಇವುಗಳ ಉದ್ದೇಶ ಬಾನುಲಿ ಪ್ರಸಾರವೇ ಆದ್ದರಿಂದ ಒಂದೊಂದು ಕೃತಿಯ ಸಂರಚನೆಯ ಸ್ವರೂಪ ಆಶಯಗಳಿಗೆ ಅನುಗುಣವಾಗಿ ಭಿನ್ನವಾಗಿದೆ. ಇವೆಲ್ಲ ನಾಟಕ ರಚನೆಗಳಲ್ಲ ; ರಂಗಪ್ರಯೋಗಕ್ಕೆ ಒಳಪಡುವಂಥವುಗಳಲ್ಲ. ಕೇವಲ ಧ್ವನಿ ಮಾಧ್ಯಮದ ಮೂಲಕವೇ ನಾಟಕಗಳ ವಸ್ತು, ಸನ್ನಿವೇಶ ಸಂದರ್ಭಗಳ ಪರಿಸರದ ಕಲ್ಪನೆಯನ್ನು ಶ್ರೋತೃಗಳಿಗೆ ಕಟ್ಟಿಕೊಡಬೇಕಾಗುತ್ತದೆ. ಆದ್ದರಿಂದ ಪಾತ್ರಗಳಿಗಿಂತಲೂ ನಿರೂಪಣೆಯ ಭಾಗಕ್ಕೆ ಹೆಚ್ಚಿನ ಮಹತ್ವವನ್ನು ನೀಡಬೇಕಾಗಿದೆ. ಶ್ರವಣ ಮಾಧ್ಯಮದ ಪರಿಚಯವಿಲ್ಲದಿದ್ದಲ್ಲಿ ಪರಿಣಾಮಕಾರಿಯಾದ ರಚನೆಗಳಾಗಲೀ ಪ್ರಸ್ತುತಿಯಾಗಲಿ ಸಾಧ್ಯವಾಗುವುದಿಲ್ಲ ಆದರೆ ಮಳಗಿಯವರಿಗೆ, ಬಾನುಲಿ ಪ್ರಸಾರಕ್ಕೆ, ರಂಗಪ್ರಯೋಗಕ್ಕೆ ಒಳಪಡುವ ರಚನೆಗಳನ್ನು ಸೃಷ್ಟಿಸುವ ಸಾಮರ್ಥ್ಯವಿದೆ. ಧಾರವಾಡ ಮತ್ತು ಬೆಂಗಳೂರು ಆಕಾಶವಾಣಿ ಕೇಂದ್ರಗಳಿಂದ ಐದು ದಶಕಗಳ ಅವಧಿಯಲ್ಲಿ

ರಚಿತವಾದ ಈ ಹತ್ತು ನಾಟಕ ಶಬ್ದಚಿತ್ರ, ರೂಪಕಗಳು ೨೦೦೬ರಲ್ಲಿ ಪ್ರೊ. ಮಳಗಿಯವರು ತಮ್ಮ ೯೬ನೇ ವಯಸ್ಸಿನಲ್ಲಿ ಪ್ರಕಟಿಸಲು ಮುಂದಾದದ್ದು ಅಚ್ಚರಿಯ ಸಂಗತಿಯಾಗಿದೆ. ಮಳಗಿಯವರಿಗೆ ಕನ್ನಡ ರಂಗಭೂಮಿಯ ಬಗ್ಗೆ ಸಾಕಷ್ಟು ಅರಿವಿದೆ. ತಾವು ಧಾರವಾಡದಲ್ಲಿ ಕಾಲೇಜು ಅಧ್ಯಾಪಕರಾಗಿದ್ದ ಸಂದರ್ಭದಲ್ಲಿ, ಕಾಲೇಜಿನ ವಾರ್ಷಿಕೋತ್ಸವ, ಸ್ವಾತಂತ್ರ್ಯೋತ್ಸವ ಇತ್ಯಾದಿ ಸಂದರ್ಭಗಳಲ್ಲಿ ನಾಟಕಗಳನ್ನು ವಿದ್ಯಾರ್ಥಿಗಳಿಂದ ಆಡಿಸುತ್ತಿದ್ದರೆಂಬುದು ಅವರಿಗೆ ನಾಟಕ ಸಾಹಿತ್ಯದ, ರಂಗಭೂಮಿಯ ಬಗೆಗಿದ್ದ ಆಸಕ್ತಿಗೆ ನಿದರ್ಶನವಾಗಿದೆ. ಅಲ್ಲದೆ ಈ ಬಾನುಲಿ ನಾಟಕಗಳ ಸಂಕಲನದಲ್ಲಿ ಮಳಗಿ ಅವರು ಪ್ರಸ್ತಾವನೆಯ ಭಾಗದಲ್ಲಿ, ಕನ್ನಡ ನಾಟಕ ಸಾಹಿತ್ಯದ ಬೆಳವಣಿಗೆಯ ಇತಿಹಾಸವನ್ನು ಕುರಿತ ಮೌಲಿಕವಾದ ಅಂಶಗಳಿವೆ. ಕನ್ನಡ ನಾಟಕಗಳು ಹಂತಹಂತವಾಗಿ ಬೆಳೆದು ಬಂದ ರೀತಿಯನ್ನು ಉದಾಹರಣೆಗಳೊಂದಿಗೆ ವಿವರಿಸಿದ್ದಾರೆ. ೧೯ನೇ ಶತಮಾನದ ಮತ್ತು ೨೦ನೇ ಶತಮಾನದ ಆರಂಭದಲ್ಲಿ ಭಾಷಾಂತರ ರೂಪದಲ್ಲಿ ಕನ್ನಡ ಲೋಕಕ್ಕೆ ಅಭಿನವ ಕಾಳಿದಾಸ ಅಭಿದಾನದ ಬಸವಪ್ಪ ಶಾಸ್ತ್ರಿಗಳಿಂದ, ಕಾಳಿದಾಸನು ಶಾಕುಂತಲ ಮೊದಲುಗೊಂಡು, ಷೇಕ್ಸ್‌ಪಿಯರ್‌ನ ಅನೇಕ ನಾಟಕಗಳು ರೂಪಾಂತರಗೊಂಡು ಪ್ರವೇಶಿಸಿದ್ದನ್ನು ಪ್ರಸ್ತಾಪಿಸುತ್ತಾರೆ. ನಂತರ ಬಂದ ವೃತ್ತಿರಂಗ ಪರಂಪರೆ ಪರಿಚಯ, ಪ್ರಯೋಗವಾಗುತ್ತಿದ್ದ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳ ಪ್ರಯೋಗದ ಸ್ವರೂಪ, ಅದ್ಭುತ ನಟನಾ ಸಾಮರ್ಥ್ಯ, ಕಂಠಸಿರಿಯ ಪ್ರಮುಖ ವೃತ್ತಿರಂಗನಟರು ನಾಟಕಕಾರರಾದ ಹುಯಿಲುಗೋಳ ನಾರಾಯಣರಾಯರು, ಕೆರೂರು ವಾಸುದೇವಾ ಚಾರ್ಯರು, ಬೆಳ್ಳಾವೆ ನರಹರಿಶಾಸ್ತ್ರಿಗಳು, ಶಾಂತಕವಿಗಳು ಮೊದಲಾದವರ ನಾಟಕಗಳ ಜನಪ್ರಿಯತೆ, ಆಧುನಿಕ ನಾಟಕಗಳ ಕಾಲಘಟ್ಟದಲ್ಲಿ ರಂಗಪ್ರಯೋಗ, ಚಿಂತನೆಗಳಲ್ಲಿ ಕಾಣಿಸಿಕೊಂಡ ಬದಲಾವಣೆ, ಹವ್ಯಾಸಿ ರಂಗಭೂಮಿಗೆ ಮಹತ್ವದ ಕೊಡುಗೆ ನೀಡಿದ ಟಿ.ಪಿ. ಕೈಲಾಸಂ, ಪರ್ವತವಾಣಿ, ಬಿ.ಎಂ.ಶ್ರೀ, ಗೋವಿಂದ ಪೈ ಅವರ ಪ್ರಸ್ತಾಪದೊಂದಿಗೆ ಮುಂದುವರೆಯುತ್ತ ಕನ್ನಡ ರಂಗಭೂಮಿಯಲ್ಲಿ ಕ್ರಾಂತಿಗೆ ದಾರಿ ಮಾಡಿದ, ಮೊದಲ ಬಾರಿಗೆ ಸಾಮಾಜಿಕ ನಾಟಕಗಳ ರಚನೆಗೆ ಮುಂದಾದ ಟಿ.ಪಿ. ಕೈಲಾಸಂ ಮತ್ತು ಶ್ರೀರಂಗರ ನಾಟಕಗಳ ಒಂದು ಸೂಕ್ಷ್ಮ ವಿಶ್ಲೇಷಣೆ ಮಾಡುತ್ತ, ಟಿ.ಪಿ. ಕೈಲಾಸಂ ಅವರ ಇಂಗ್ಲಿಷ್ ಮಿಶ್ರಿತ ಕನ್ನಡ ಭಾಷೆಯ ವಿಶಿಷ್ಟ ಶೈಲಿಯನ್ನೂ, ಶ್ರೀರಂಗರ ಉತ್ತರ ಕರ್ನಾಟಕದ ಜನಬಳಕೆಯ ದೇಸಿ ಶೈಲಿಯ ಮೂಲಕ ವಾಸ್ತವತೆ, ವೈಚಾರಿಕತೆಗಳನ್ನು ಬೆಸೆದ ರೀತಿಯನ್ನು ಗಮನಿಸಿದ್ದಾರೆ. ಇವರ ಜೊತೆಗೆ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದ ನಾಟಕಗಳನ್ನು ಬರೆದ ಸಂಸ, ಅಲ್ಲದೆ ಸಾಹಿತಿ ನಾಕಕಾರರಾದ ಕಾರಂತ, ಕುವೆಂಪು, ಡಿವಿಜಿ, ಬೇಂದ್ರೆ, ಮಾಸ್ತಿ, ಪುತಿನ, ಎ.ಎನ್. ಮೂರ್ತಿರಾವ್, ಮೊದಲಾದವರೊಂದಿಗೆ ನವ್ಯ ನಾಟಕಕಾರರೆಂದು ಗುರುತಿಸಿಕೊಂಡ ಪಿ. ಲಂಕೇಶ್, ಗಿರೀಶ್ ಕಾರ್ನಾಡ್, ಚಂದ್ರಶೇರ ಪಾಟೀಲ ಮೊದಲಾದವರನ್ನೂ ಪ್ರಸ್ತಾಪಿಸಿ, ತಮಗೆ ನಾಟಕಗಳ ರಚನೆ, ಪ್ರಯೋಗದ ಬಗೆಗಿದ್ದ ಅರಿವು, ಅನುಭವಗಳ ಸ್ಪಷ್ಟ ಚಿತ್ರಣವನ್ನು ನೀಡಿದ್ದಾರೆ.

ಪ್ರಸ್ತುತ ಈ ಬಾನುಲಿ ನಾಟಕಗಳ ಸಂಕಲನದಲ್ಲಿನ ಹತ್ತು ನಾಟಕಗಳಲ್ಲಿ ಮೊದಲ ನಾಟಕ, ಬಾನುಲಿ ನಾಟಕವೇ ಆಗಿದ್ದು, ೧೩ನೇ ಶತಮಾನದ ಚಳುಕ್ಯ ಸಾಮ್ರಾಟ ಇಮ್ಮಡಿ ಪುಲಿಕೇಶಿ, ತನ್ನ ತಂದೆ ಕೀರ್ತಿವರ್ಮರ ಸಾವಿನಿಂದಾಗಿ, ಬಾಲಕನಾಗಿದ್ದವನು ಸಿಂಹಾಸನಾರೋಹಣ ಮಾಡಲಾಗ ಚಿಕ್ಕಪ್ಪ ಮಂಗಳೇಶನೇ ಅವನ ಪ್ರತಿನಿಧಿಯಾಗಿ ರಾಜ್ಯವಾಳುತ್ತಿದ್ದವನು, ತನ್ನ ಸ್ವಾರ್ಥದಿಂದಾಗಿ, ರಾಜಕೀಯ ಪಿತೂರಿಗಳನ್ನು ನಡೆಸಿ, ತನ್ನ ಮಗನಿಗೇ ಪಟ್ಟ ಕಟ್ಟುವ ಮಹತ್ವಾಕಾಂಕ್ಷೆಯಲ್ಲಿ ಪುಲಿಕೇಶಿಯ ಕೊಲೆಗೆ ಪ್ರಯತ್ನಿಸುವನಾದರೂ ರಾಜನಿಷ್ಠರಾಗಿದ್ದ ಮಹಾಮಾತ್ಯರ ಮತ್ತು ದಂಡನಾಯಕ ರವಿಕೀರ್ತಿ ಇವರ ಮುಂದಾಲೋಚನೆಯಿಂದ ಚಿಕ್ಕಪ್ಪನ ಹುನ್ನಾರಗಳೆಲ್ಲ ಮಣ್ಣುಪಾಲಾಗುವುದೇ ಅಲ್ಲದೆ ಮಂಗಳೇಶನೂ ಮಡಿಯುತ್ತಾನೆ. ಕೈಜಾರಿ ಹೋಗಲಿದ್ದ ಚಳುಕ್ಯ ಸಾಮ್ರಾಜ್ಯ ಪುಲಿಕೇಶಿಗೇ ಉಳಿಯುತ್ತದೆ. ವಿಜಯೋತ್ಸವದ ಸಂಭ್ರಮದ ಗುಂಗಿನಲ್ಲಿ ಇರುವಾಗಲೇ ಹರ್ಷ ಸಾಮ್ರಾಟನ ದೃಷ್ಟಿ ದಕ್ಷಿಣಾಪಥದ ಮೇಲೆ ಬಿದ್ದಿರುವ ಸುದ್ದಿ ನಂಬಲಾಗದ ಸಂಗತಿಯಾಗಿ ಪರಿಣಮಿಸುತ್ತದೆ. ಚಳುಕ್ಯರ ಮತ್ತು ಹರ್ಷ ಸಾಮ್ರಾಟರ ನಡುವೆ ಯಾವುದೇ ವೈರತ್ವವಿಲ್ಲ. ಅಲ್ಲದೆ ಹ್ಯೂಯೆನ್‌ತ್ಸಾಂಗರಿಗೆ ಅದ್ದೂರಿಯ ಸ್ವಾಗತ ಸನ್ಮಾನಗಳನ್ನೂ ನೀಡಲಾಗಿದೆ. ಹೀಗಿರುವಾಗ ಹರ್ಷ ಯುದ್ಧ ಘೋಷಿಸಿ ಬಂದಿರುವುದು ಅನೇಕ ಊಹಾಪೋಹಗಳಿಗೆ ಕಾರಣವಾಗುತ್ತದೆ. ಆದರೆ ಪುಲಿಕೇಶಿ ಯುದ್ಧವನ್ನು ಎದುರಿಸುವುದು ಸಹಜ ಕ್ರಿಯೆ ಎಂಬಂತೆ ಭಾವಿಸಿ, ಹರ್ಷನನ್ನು ಸಮರ ಭೂಮಿಯಲ್ಲಿ ಮುಖಾಮುಖಿಯಾಗಲು ಶೌರ್ಯ ಸಾಹಸಗಳಿಂದ ಮುಂದಾಗುತ್ತಾನೆ. ಪುಲಿಕೇಶಿಯು ತಳೆದಿದ್ದ ಭರವಸೆಯಂತೆ ಹರ್ಷನ ಮೇಲೆ ದಿಗ್ವಿಜಯವನ್ನು ಸಾಧಿಸುತ್ತಾನೆ. ಈ ಇಬ್ಬರೂ ಚಕ್ರವರ್ತಿಗಳು ಪರಾಕ್ರಮಿಗಳೂ ಸುಸಂಸ್ಕೃತರೂ ಆಗಿರುವುದರಿಂದ ಇಬ್ಬರ ನಡುವೆ ವೈರ ದ್ವೇಷಗಳಿಗೆ ಬದಲಾಗಿ ಸ್ನೇಹ ಸಂಬಂಧಗಳು ಗಟ್ಟಿಗೊಳ್ಳುವುದೇ ಅಲ್ಲದೆ ಹರ್ಷನ 'ಪರಮೇಶ್ವರ' ಬಿರುದು ಪುಲಿಕೇಶಿಗೆ ಉಡುಗೊರೆಯಾಗಿ ಸಲ್ಲುತ್ತದೆ. ಒಂದು ಐತಿಹಾಸಿಕ ಘಟನೆಯ ಹಿನ್ನೆಲೆಯಲ್ಲಿ ಹೆಣೆದ ಸರಳ ನಿರೂಪಣೆಯ ನಾಟಕ ಪುಲಿಕೇಶಿಯ ಧೈರ್ಯ ಸಾಹಸಗಳನ್ನು, ಹರ್ಷ ಸಾಮ್ರಾಟನ ಸ್ನೇಹ, ಸೌಜನ್ಯಗಳನ್ನೂ ಬಿಂಬಿಸುವಲ್ಲಿ ಯಶಸ್ವಿಯಾಗಿದೆ.

ಎರಡನೆಯದು–ನಾಲ್ಕು ಅಂಕಗಳಲ್ಲಿನ ನಾಟಕ **ದಾನ ಚಿಂತಾಮಣಿ ಅತ್ತಿಮಬ್ಬೆ.** ೧೯೭೪ರಲ್ಲಿ ಬೆಂಗಳೂರು ಆಕಾಶವಾಣಿಯಲ್ಲಿ ಪ್ರಸಾರವನ್ನು ಕಂಡಿದೆ. ಹೆಸರೇ ದಾನಚಿಂತಾಮಣಿ ಅತ್ತಿಮಬ್ಬೆ. ಕನ್ನಡದ ಕವಿರತ್ನತ್ರಯರಲ್ಲಿ ಒಬ್ಬನಾದ ರನ್ನ ಬಾಲ್ಯದಲ್ಲಿಯೇ, ತಂದೆಯ ಜೊತೆಗೂಡಿ ಬಳೆ ಮಾರುತ್ತಾ ಬಂದು ಆಕಸ್ಮಿಕವಾಗಿ ಅತ್ತಿಮಬ್ಬೆ, ಗುಂಡಮಬ್ಬೆ ಮತ್ತು ಇವರಿಬ್ಬರ ತಾಯಿ ಅಬ್ಬಕಬ್ಬೆಯರ ದೃಷ್ಟಿಗೆ ಬಿದ್ದು, ಎಳೆಯ ಪ್ರಾಯದ ರನ್ನನ ಚುರುಕುತನದಿಂದ ಆಕರ್ಷಿತರಾಗಿ ರನ್ನನ ವಿದ್ಯಾಭ್ಯಾಸದ ತುಡಿತದ ಬಗ್ಗೆ ತಿಳಿದು, ಅವನಿಗೆ ಆಶ್ರಯವಿತ್ತು, ಪೋಷಿಸಿ, ಅವನಲ್ಲಿನ ಕಾವ್ಯ ಪ್ರತಿಭೆಯ ಪ್ರಕಾಶನಕ್ಕೆ ಅನುವು ಮಾಡಿಕೊಟ್ಟ ಅತ್ತಿಮಬ್ಬೆಯ ಔದಾರ್ಯ, ಕಾವ್ಯಪ್ರೀತಿ, ದಾನಬುದ್ಧಿ, ಶೌರ್ಯ, ಸಾಹಸಗಳ ಕಥೆಯೇ ಇದರ ವಸ್ತು. ಈಕೆಯ ಕಾಲದಲ್ಲಿ ನಡೆದ ಶ್ರವಣಬೆಳ್ಗೊಳದ ಗೊಮ್ಮಟ ವಿಗ್ರಹದ ಪ್ರತಿಷ್ಠಾಪನೆ, ಪ್ರಥಮ ಮಹಾಮಸ್ತಕಾಭಿಷೇಕ, ಇದೇ ಸಂದರ್ಭದಲ್ಲಿ ಪಂಪ–

ಪೊನ್ನರೊಡನೆ ರನ್ನನ ಭೇಟಿ, ಅತ್ತಿಮಬ್ಬೆ-ಗುಂಡಮಬ್ಬೆಯರೊಂದಿಗೆ ಚಾಲುಕ್ಯ ಸೇನಾಪತಿ ನಾಗದೇವನೊಂದಿಗೆ ವಿವಾಹ, ಅಣ್ಣಿಗನ ಜನನ, ನಾಗದೇವನ ಸಾವು, ಇರಿವ ಬೆಡಂಗ ಸತ್ಯಾಶ್ರಯನೆಡೆಗೆ ರನ್ನ ಕವಿಯ ಪಯಣ, ಇರಿವ ಬೆಡಂಗನ ಸಾಹಸ ಪರಾಕ್ರಮಗಳನ್ನು ದರ್ಶಿಸುವ ಪರಮಾರರ ಮೇಲಿನ ದಿಗ್ವಿಜಯ-ಇತ್ಯಾದಿ ಎಲ್ಲ ಸಂಗತಿಗಳನ್ನೂ ಅಚ್ಚುಕಟ್ಟಾಗಿ ಹೆಣೆದ ನಾಟಕ ರೂಪ ಇದಾಗಿದೆ. ಇದಕ್ಕೆ ಮೂಲ ಜಿ. ಬ್ರಹ್ಮಪ್ಪನವರ ದಾನಚಿಂತಾಮಣಿ ಅತ್ತಿಮಬ್ಬೆ ಕಾದಂಬರಿಯಾಗಿದೆ.

ಮೂರನೆಯದಾದ **'ಮಲುಹಣದೇವ'** ನಾಲ್ಕು ಅಂಕಗಳ ಬಾನುಲಿ ರೂಪಕವಾಗಿದೆ. ೧೯೬೩ರಲ್ಲಿ ಬೆಂಗಳೂರು ಆಕಾಶವಾಣಿಯಲ್ಲಿ ಬಿತ್ತರಗೊಂಡಿದೆ. ಈ ರೂಪಕಕ್ಕೆ ೧೩ನೇ ಶತಮಾನದ ಹರಿಹರನ ಮಲುಹಣದೇವರ ರಗಳೆಯೇ ಪ್ರಮುಖ ಆಕರವಾಗಿದೆ. ಇಡೀ ಕಥಾನಕವನ್ನೇ ನಾಟಕವಾಗಿಸದೆ ವಯಸ್ಸಿಗೆ ಬಂದ ಮಲುಹಣ, ಮಲುಹಣಿಯರ ಪರಿಚಯವಾಗಿ ಅವರಿಬ್ಬರ ನಡುವೆ ಉತ್ಕಟ ಪ್ರೀತಿ ಬೆಳೆದು, ತಂದೆಯು ಬಿಟ್ಟಿದ್ದ ಏಳು ತಲೆಮಾರುಗಳಿಗೆ ಆಗುವಷ್ಟು ಸಂಪತ್ತನ್ನು ಅವಳ ಪ್ರೀತಿಗಾಗಿ ತೆತ್ತು, ಕಡೆಗೆ ಆಕೆಯ ತಾಯಿಯಿಂದ, ನಿರ್ಗತಿಕ ಸ್ಥಿತಿಗೆ ತಲುಪಿದ ಮಲುಹಣನಿಗೆ ಅವಮಾನ, ಅವಹೇಳನ, ತಿರಸ್ಕಾರಗಳು ಉಂಟಾಗಿ ಜೀವದ ಮೇಲಿನ ಆಸೆ ತೊರೆದು ಮಲುಹಣಿಗಾಗಿ ಮಲುಹಣಿಯ ಪ್ರೀತಿಗಾಗಿ ಹಂಬಲಿಸುತ್ತಾ, ಅಳಲುತ್ತ, ಬಳಲುತ್ತ ಅವಳ ಮನೆಮುಂದೆಯೇ ಕೊರೆವ ಚಳಿಯಲ್ಲಿ ರಾತ್ರಿಯನ್ನು ಕಳೆದು, ಮೈಯೆಲ್ಲವೂ ಹಿಮಾವೃತವಾಗಿದ್ದ ಸ್ಥಿತಿಯಲ್ಲಿ ಮಲುಹಣಿ ಮತ್ತು ಸಖಿಯರ ಕಣ್ಣಿಗೆ ಬೀಳುತ್ತಾನೆ. ಮಲುಹಣನಂತೆಯೇ ಮಲುಹಣಿಯೂ ಕೂಡಾ ತಾಯಿ ಪದ್ಮಾವತಿಯ ನಿರ್ಬಂಧಗಳನ್ನು, ಬೆದರಿಕೆಗಳನ್ನು ಮೀರಿ ಅವನನ್ನು ಪ್ರೀತಿಸುತ್ತಾಳೆ.

ಮಲುಹಣನಲ್ಲಿದ್ದ ಕೊಪ್ಪರಿಗೆಗಟ್ಟಲೆ ಹಣವನ್ನೆಲ್ಲ ಸೂರೆಗೊಂಡು, ನಿರ್ಗತಿಕನ ನ್ನಾಗಿಸಿದ ತಾಯಿಯ ಕ್ರೌರ್ಯ ಅಮಾನುಷವೆನಿಸುತ್ತದೆ, ಮಲುಹಣಿಗೆ ತನ್ನ ಪ್ರಿಯಕರ ತನ್ನ ಮೇಲಿರಿಸಿಕೊಂಡಿದ್ದ ಅದಮ್ಯ ಪ್ರೀತಿಗೆ ಸೋಲುವಂತಿದ್ದರೂ ತನ್ನ ಅಸಹಾಯಕತೆ ಯಿಂದಾಗಿ ಅವನ ಪ್ರೀತಿಯನ್ನು ಒಪ್ಪಿಕೊಳ್ಳಲು ಸಾಧ್ಯವಾಗುವುದಿಲ್ಲ. ಅವನ ಮನಸ್ಸನ್ನು ತನ್ನಿಂದ ವಿಮುಖಗೊಳಿಸಲು "ಎನ್ನ ಮೇಲಿಕ್ಕುವೀ ಚಿತ್ತದಾತುರತೆಯನ್ನು ಪನ್ನಗಾಭರಣ ನಲಿ" ಮಾಡೆಂದು ತಿಳಿಹೇಳಿ ಕಳಿಸುತ್ತಾಳೆ. ಶಂಭುವನ್ನು ಒಲಿಸಿಕೊಂಡಲ್ಲಿ ಮಲುಹಣಿ ದೊರೆಯುತ್ತಾಳೆಂಬ ಹುಂಬು ನಂಬಿಕೆಯಲ್ಲಿ ಹೊರಡುತ್ತಾನೆ. ಪ್ರಸಾರಕ್ಕೆ ಬೇರಾದ ರೀತಿಯಲ್ಲಿ ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾರೆ. ನಾಟಕಕ್ಕೆ ಪೂರಕವಾಗಿ, ಅನಿವಾರ್ಯವೆನಿಸುವ ಸನ್ನಿವೇಶದಲ್ಲಿ ರಗಳೆ ಕಾವ್ಯದಲ್ಲಿನ ಪದ್ಯಭಾಗವನ್ನು, ಮಲ್ಹಣ ಸ್ತೋತ್ರವನ್ನು ಸೇರಿಸಿ, ಪರಿಣಾಮಕಾರಿಯೆನಿಸುವಂತೆ ಪರಿಸರ ಸೃಷ್ಟಿಗೆ ದಾರಿ ಮಾಡಿದ್ದಾರೆ.

ನಾಲ್ಕನೆಯದಾದ **'ಸಂಗೊಳ್ಳಿರಾಯಣ್ಣ'**, ೧೯ನೇ ಶತಮಾನದ ಕಿತ್ತೂರು ರಾಣಿ ಚೆನ್ನಮ್ಮನ ಯಃಕಶ್ಚಿತ್ ಓಲೇಕಾರನಾಗಿದ್ದವನು ದೇಶನಿಷ್ಠೆ, ರಾಜನಿಷ್ಠೆಗಳನ್ನು ಮೈಗೂಡಿಸಿಕೊಂಡಿದ್ದವನು ತನ್ನ ನಾಡಾದ ಕಿತ್ತೂರು ಬ್ರಿಟಿಷರ ಕೈವಶವಾಗಿ ಕಿತ್ತೂರಿನ

ರಾಣಿ ಚೆನ್ನಮ್ಮ ಸೆರೆಯಾಗಿದ್ದ ಸಂದರ್ಭದಲ್ಲಿ, ಬ್ರಿಟಿಷರ ವಿರುದ್ಧ ಹೋರಾಡಿ ತನ್ನ ದೇಶಪ್ರೇಮ, ಸ್ವಾಮಿನಿಷ್ಠೆಗಳನ್ನು ಮೆರೆದ ಕಥೆಯೇ ಈ ನಾಟಕದ ವಸ್ತು, ಬೈಲಹೊಂಗಲದ ಸೆರೆಮನೆಯಲ್ಲಿ ಹತಾಶ ಸ್ಥಿತಿಯಲ್ಲಿ ನಿಟ್ಟುಸಿರಿಡುತ್ತಿದ್ದ ಚೆನ್ನಮ್ಮನ ದತ್ತು ಮಗನನ್ನು ಮತ್ತೆ ಕಿತ್ತೂರ ಗಾದಿಯ ಮೇಲೆ ಕೂರಿಸುವ ಪಣ ತೊಟ್ಟು, ಮಿಂಚಿನಂತೆ ಎಲ್ಲೆಲ್ಲೂ ಹರಿದಾಡಿ ಹಳ್ಳಿಹಳ್ಳಿಗಳಲ್ಲಿ ದೇಶಪ್ರೇಮದ ಕಿಡಿಗಳನ್ನು ಹೊತ್ತಿಸುತ್ತ ಚೈತನ್ಯ ತುಂಬುತ್ತಾ, ತರುಣ ವೀರರ ಪಡೆಕಟ್ಟಿ ಬ್ರಿಟಿಷರಿಗೆ ಚಳ್ಳೆಹಣ್ಣು ತಿನಿಸಿದ. ತಲೆನೋವಾಗಿ ಪರಿಣಮಿಸಿದ ರಾಯಣ್ಣನ ದಂಗೆ ಅತ್ಯಂತ ವ್ಯಾಪಕವಾಗಿ ಹಬ್ಬಿತು. ಆದರೆ ನಮ್ಮ ನಾಡಿನಲ್ಲಿ ದೇಶಪ್ರೇಮಿಗಳಿರುವಂತೆ ದೇಶದ್ರೋಹಿಗಳೂ ಬೆನ್ನಿಗೆ ಚೂರಿ ಇಡುವ ನಯವಂಚಕರು, ಪಿತೂರಿಕೋರರೂ ಇರುವುದು ಐತಿಹಾಸಿಕ ಸತ್ಯ. ಇತಿಹಾಸದ ಉದ್ದಕ್ಕೂ ಅನೇಕ ಹೋರಾಟಗಳಲ್ಲಿ ದೇಶದ್ರೋಹಿಗಳಿಂದಾಗಿ ಸ್ವಾಮಿನಿಷ್ಠ ಅಸಮಬಲರೂ ವೀರರೂ ಆದವರು ಅಸುನೀಗಿ ಕೈಗೆಟುಕಬಹುದಾಗಿದ್ದ ಗೆಲುವು, ಸಾವು ನೋವುಗಳಲ್ಲಿ ಪರಿಸಮಾಪ್ತ ಗೊಂಡ ಸಂದರ್ಭಗಳನ್ನು ಇತಿಹಾಸದ ಪುಟಗಳಲ್ಲಿ ದಾಖಲಾಗಿರುವುದು ತಿಳಿದ ವಿಷಯವೇ !

ಸಾವಿನಂಚಿನಲ್ಲಿ ಇರುವಾಗಲೂ ಸಂಗೊಳ್ಳಿ ರಾಯಣ್ಣ ಧೈರ್ಯ ಮತ್ತು ದೇಶಭಕ್ತಿಗಳನ್ನು ಮೆರೆದ ಕಥೆಯೇ ಇದಾಗದೆ. ಇಲ್ಲಿ ಈ ಬಾನುಲಿ ನಾಟಕದಲ್ಲಿ ಪಾತ್ರಗಳು ಪಾತ್ರಗಳಾಗಿ ಬರುವುದಿಲ್ಲ. ರಾಯಣ್ಣ ಮಾತ್ರವೇ ಕಾಣಿಸುತ್ತಾನಾದರೂ, ಪ್ರತಿಯೊಂದು ಘಟನೆ, ಸನ್ನಿವೇಶದ ನಿರೂಪಣೆ, ಸಂಭಾಷಣೆಗಳು ಎರಡು ಧ್ವನಿಗಳ ಮೂಲಕ ನಿರ್ವಹಿಸಲಾಗಿದೆ. ನೇರ, ಮುಖಾಮುಖಿ ಸಂಭಾಷಣೆಗಳು ಬರುವುದಿಲ್ಲ. ಕೇವಲ ನಿರೂಪಣೆಯ ಮೂಲಕವೇ ಘಟಿಸಿದ, ಘಟಿಸಲಿರುವ ಸಂಗತಿಗಳ ಪರಿಚಯ ಕೇಳುಗರಿಗೆ ಆಗುವುದಲ್ಲದೆ ಕಥೆಯ ಬೆಳವಣಿಗೆಯ ಕಲ್ಪನೆಯೂ ಉಂಟಾಗುತ್ತದೆ.

ಐದನೆಯದಾದ **'ನರಗುಂದ ಬಂಡಾಯ'ವೂ** ಐತಿಹಾಸಿಕ ಘಟನೆಯನ್ನು ಆಧರಿಸಿದ ಬಾನುಲಿ ರೂಪಕವಾಗಿದೆ. ದಕ್ಷಿಣ ಭಾರತದ ಸಂಸ್ಥಾನಿಕರಾದ ಭಾಸ್ಕರ್‌ರಾವ್ ಉರುಫ್ ಬಾಬಾ ಸಾಹೇಬ, ಮುಂಡರಗಿ ಭೀಮರಾಯ, ರಾಮದುರ್ಗದ ಮಹಾರಾಜರು, ನಾನಾ ಸಾಹೇಬ್ ಪೇಶ್ವೆ ಮೊದಲಾದವರೆಲ್ಲರೂ ಸಂಘಟಿತರಾಗಿ ಬ್ರಿಟಿಷರ ವಿರುದ್ಧ ನಡೆಸಿದ ಹೋರಾಟದ ಕಥೆಯೇ ಇದಾಗಿದೆ. ಸಂಸ್ಥಾನಿಕರ ಹಕ್ಕು ಅಧಿಕಾರಗಳಿಗೆ, ಕತ್ತರಿ ಹಾಕುವಂಥ ದತ್ತಕ ರದ್ಧತಿ ಕಾಯಿದೆ ತಂದು ವಂಶಾಭಿವೃದ್ಧಿಗೆ, ಮುಂದುವರಿಕೆಗೆ ಅವಕಾಶವಿಲ್ಲದಂತೆ ಮಾಡಿದ್ದೇ ಅಲ್ಲದೆ ನಿಶ್ಶಸ್ತ್ರೀಕರಣ ಕಾಯಿದೆ ಇನಾಮುರದ್ಧತಿ ಕಾಯಿದೆಗಳನ್ನು ತಂದು ಎಲ್ಲಾ ರೀತಿಯಿಂದಲೂ ಸಂಸ್ಥಾನಿಕರನ್ನು ಅಸಹಾಯಕರನ್ನಾಗಿ ಸಿದರು. ಈ ಕಾಯಿದೆಗಳ ಅನುಷ್ಠಾನದೊಂದಿಗೆ ಹಲವು ಸಂಸ್ಥಾನಗಳ ಸುಮಾರು ೨೧,೦೦೦ ಆಸ್ತಿಗಳು ಜಪ್ತಾದವು. ಇದರಿಂದಾಗಿ ಇನಾಂದಾರರು, ಜಹಗೀರದಾರರು, ದೇಸಾಯರು, ದೇಶಪಾಂಡೆಗಳು ನಿಸ್ಸಹಾಯಕ ಸ್ಥಿತಿಯಲ್ಲಿ ಕುಳಿತುಕೊಳ್ಳುವಂತಾಯಿ ತಾದರೂ, ತಮ್ಮೊಳಗೆ ತಮಗಾದ ಅವಮಾನದಿಂದ ಉಂಟಾದ ರೋಷಾವೇಶದ ಕಿಚ್ಚಿನಿಂದ ಸೇಡು ತೀರಿಸಕೊಳ್ಳದೆ ಬ್ರಿಟಿಷರನ್ನು ಬಿಡಬಾರದು. ಅವರ ದೌರ್ಜನ್ಯ,

ದಬ್ಬಾಳಿಕೆಗಳನ್ನು ಹೇಡಿಗಳಂತೆ ಸಹಿಸಿಕೊಂಡು, ಬಾಯಿ ಕಟ್ಟಿ ಕುಳಿತುಕೊಳ್ಳುವುದಕ್ಕಿಂತಲೂ ಅವರೊಂದಿಗೆ ಹೋರಾಡಿ ಸಾವನ್ನಾದರೂ ಅಪ್ಪಿಕೊಳ್ಳಲು ಸಿದ್ಧರಾದರೆ ಹೊರತು, ಸ್ವಾತಂತ್ರ್ಯ, ಸ್ವಾಭಿಮಾನಗಳನ್ನು ಯಾವುದೇ ಕಾರಣಕ್ಕೂ ಬಿಟ್ಟುಕೊಡಬಾರದೆಂಬ ದೃಢ ನಿರ್ಧಾರವನ್ನು ಕೈಗೊಂಡು ಯುದ್ಧ ಸಿದ್ಧತೆ ಮಾಡಿಕೊಂಡರು. ಬ್ರಿಟಿಷರಿಗೆ ಅವರ ಯುದ್ಧ ಬಂಡಾಯವಾಗಿ ಕಾಣುತ್ತದೆ. ಬ್ರಿಟಿಷರ ಕಡೆಯ ಮ್ಯಾನ್ಸನ್‌ನ ಸಾವು ಬ್ರಿಟಿಷರನ್ನು ಮತ್ತಷ್ಟು ಕೆರಳಿಸಿ, ನರಗುಂದದ ಕೋಟೆಯನ್ನು ಮುತ್ತಿದ್ದರು. ಬಾಬಾ ಸಾಹೇಬರ ನೇತೃತ್ವದಲ್ಲಿ, ಬ್ರಿಟಿಷರ ವಿರುದ್ಧ ಗೆಲುವಿನ ಹಾದಿಯಲ್ಲಿರುವಾಗಲೇ ತಮ್ಮವರೇ ಆದವರ ದೇಶದ್ರೋಹದ ಸಂಚಿನಿಂದ, ಮದ್ದುಗುಂಡುಗಳಿಗೆ ನೀರು ಬೆರೆಸಿ, ಅವು ನಿಷ್ಪ್ರಯೋಜಕವಾಗುವಂತೆ ಮಾಡಿದುದರ ಫಲವಾಗಿ, ಬಾಬಾ ಸಾಹೇಬರ ಕಣ್ಮರೆ, ಅರಮನೆ ಲೂಟಿ,  ಅರಮನೆಯ ಗ್ರಂಥಾಲಯ ಧ್ವಂಸ, ಬ್ರಿಟಿಷರಿಂದ ಊರು, ಕೋಟೆಗಳ ಮೇಲೆ ಆಕ್ರಮಣ, ಬಾಬಾ ಸಾಹೇಬರ ಮಡದಿ, ತಾಯಿಯರ ಜಲಸಮಾಧಿ ಇತ್ಯಾದಿ ಅನರ್ಥಗಳು ಸಂಭವಿಸುತ್ತವೆ. ಕಡೆಯಲ್ಲಿ ಬಾಬಾ ಸಾಹೇಬರು ಗಲ್ಲು ಶಿಕ್ಷೆಗೆ ಒಳಗಾಗಿ ಸಾವನ್ನಪ್ಪಿದ ಸೂಚನೆ ಇದೆ. ಏನೇ ಆದರೂ ನರಗುಂದದ ಈ ಬಂಡಾಯವನ್ನು ಲೋಕಮಾನ್ಯ ತಿಲಕರು ಹಾಗೂ ಮಹಾತ್ಮಾ ಗಾಂಧೀಜಿಯವರ ಕೊನೆಯ ಯಶಸ್ವೀ ಸ್ವಾತಂತ್ರ್ಯ ಯುದ್ಧಕ್ಕೆ ಬುನಾದಿಯಾಗಿಸಿತೆಂಬ ಮಾತಿದೆ. ನರಗುಂದದ ಬಂಡಾಯವನ್ನು ಒಟ್ಟಿನಲ್ಲಿ ಸೋತು ಗೆದ್ದ ಬಂಡಾಯವೆಂದೇ ಇತಿಹಾಸ ಗುರುತಿಸಿದೆ ಎನ್ನಲಾಗಿದೆ. ಇದು ಬಾನುಲಿ ನಾಟಕವೇ ಆದರೂ ರಂಗನಾಟಕದಂತೆ ಪಾತ್ರಗಳಿವೆ. ಹಿನ್ನೆಲೆಯಲ್ಲಿ ಸನ್ನಿವೇಶಗಳ ವಿವರಣೆಯನ್ನು ಧ್ವನಿತಂತ್ರದ ಮೂಲಕವಾಗಿ ನಿರ್ವಹಿಸಲಾಗಿದೆ.

ಆರನೆಯದಾದ **'ಶಿಶುನಾಳ ಸಂತ ಶರೀಫ್ ಸಾಹೇಬರು'** ಶುದ್ಧ ಶಬ್ದಚಿತ್ರವಾಗಿದೆ. ಸಂತ ಶಿಶುನಾಳರ ಸಮಗ್ರ ಜೀವನ ಚಿತ್ರ, ಅವರ ಅಧ್ಯಾತ್ಮಿಕ ಸಾಧನೆ, ಅನುಭಾವದ ಔನ್ನತ್ಯ, ಅವರ ವಿಲಕ್ಷಣ ಕಾವ್ಯಪ್ರತಿಭೆ, ಗುರು ಗೋವಿಂದಭಟ್ಟರೆಂಬ ಸಂಪ್ರದಾಯಸ್ಥ ವೈದಿಕ ಬ್ರಾಹ್ಮಣನ ಅನುಗ್ರಹಕ್ಕೆ ಪಾತ್ರರಾಗಿದ್ದು, ಹಿಂದು–ಮುಸ್ಲಿಂರ ಐಕ್ಯಕ್ಕಾಗಿ ಹೆಣಗಾಡಿದ್ದೇ ಅಲ್ಲದೆ ಅಧ್ಯಾತ್ಮದ ಮೂಲಕ ಈ ಎರಡೂ ಜಾತಿಗಳ ನಡುವೆ ಭಾವೈಕ್ಯೆಯನ್ನು ಸಾಧಿಸಲು ಪ್ರಯತ್ನಿಸಿದ್ದು, ವೈದಿಕ ಸಂಪ್ರದಾಯಸ್ಥ ಗುರುಗಳ ಮಾರ್ಗದರ್ಶನದಲ್ಲಿ ಶರೀಫರು ವೇದೋಪನಿಷತ್ತು, ಶಾಸ್ತ್ರಪುರಾಣ, ಭಗವದ್ಗೀತೆ, ರಾಮಾಯಣ, ಮಹಾಭಾರತಾದಿ ಮಹಾಕಾವ್ಯಗಳನ್ನು ಅಧ್ಯಯನ ಮಾಡಿ ಕರಗತ ಮಾಡಿಕೊಂಡದ್ದು, ಮೊದಲಿಗೆ ಸಾಂಸಾರಿಕ ನೋವು, ಸಂಕಟಗಳನ್ನು ಅನುಭವಿಸಿದ್ದು–ಹೀಗೆ ಪ್ರತಿಯೊಂದು ವಿವರವೂ ನಿವೇದಕ ತಂತ್ರದಿಂದ ನಿರ್ವಹಿಸಿದ್ದಾರೆ. ಒಮ್ಮೊಮ್ಮೆ ನಿವೇದನ ನಿರೂಪಣೆಯ ಸಂದರ್ಭದಲ್ಲಿ, ಫ್ಲಾಶ್‌ಬ್ಯಾಕ್ ಮಾದರಿಯಲ್ಲಿ, ಶರೀಫರು ಮತ್ತು ಗುರುಗಳ ನಡುವಿನ ಸಂಭಾಷಣೆ, ಜನರ ಗದ್ದಲ ಇತ್ಯಾದಿಗಳನ್ನು ಧ್ವನಿ ವೈವಿಧ್ಯಗಳಿಂದ ನಿರ್ವಹಿಸಲಾಗಿದೆ. ಅಲ್ಲಲ್ಲಿ ಶರೀಫರ ತತ್ವಪದಗಳನ್ನು ನಿರೂಪಣೆಯ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ. ಮತ್ತೊಂದು ವಿಶೇಷವಾದ ಅಂಶವೆಂದರೆ, ಶರೀಫರ ತತ್ವಪದಗಳಲ್ಲಿನ ತಾತ್ವಿಕ ಅಂಶಗಳ,

ತತ್ವಾರ್ಥಗಳ ವಿವರಣೆಯ ಮೂಲಕ, ಮಳಗಿಯವರ ವಿಚಾರ ಮಂಥನ, ವಿಮರ್ಶಕ ದೃಷ್ಟಿಗಳೂ ಈ ಮಾಧ್ಯಮದಲ್ಲಿಯೂ ಕಾಣಿಸಿಕೊಂಡಿರುವುದು ಮುಖ್ಯ ಸಂಗತಿಯಾಗಿದೆ.

ಇದೇ ರೀತಿಯ ಮತ್ತೊಂದು ಶಬ್ದಚಿತ್ರ (೭ನೆಯ) ಕರ್ನಾಟಕ ಕುಲಪುರೋಹಿತ ರೆಂದು ಕರೆಸಿಕೊಂಡ **ಆಲೂರು ವೆಂಕಟರಾಯರನ್ನು** ಕುರಿತಾದ್ದು. ಮಳಗಿಯವರಿಗೆ ಆಲೂರು ವೆಂಕಟರಾಯರು ಬಹಳ ಹತ್ತಿರದಿಂದ ಪರಿಚಿತರಾದವರು. ಅವರ ಮನೆಯಲ್ಲಿದ್ದುದನ್ನು, ಅವರನ್ನು ತಂದೆಯಾಗಿ ಭಾವಿಸುತ್ತಿದ್ದುದನ್ನು ಒಂದು ಕಡೆ ಹೇಳಿಕೊಂಡಿದ್ದಾರೆ. ಆಲೂರರಲ್ಲಿದ್ದ ಪ್ರಚಂಡ ಕನ್ನಡ, ಕರ್ನಾಟಕಗಳ ಬಗೆಗಿನ ಪ್ರೀತಿ, ಏಕೀಕರಣಕ್ಕಾಗಿ ಬಿರುಗಾಳಿಯಂತೆ ಸಂಚರಿಸಿ, ಕನ್ನಡ ಮನಗಳನ್ನು ಸಂಘಟಿಸಿ, ಕರ್ನಾಟಕ, ಕರ್ನಾಟಕತ್ವ ಪರಿಕಲ್ಪನೆಗಳಿಗೆ ಹೊಸ ವ್ಯಾಖ್ಯಾನವನ್ನು ನೀಡಿ, ತಮ್ಮ ಜೀವನ ಸರ್ವಸ್ವವನ್ನೂ ಹೋರಾಟಕ್ಕಾಗಿ ಮೀಸಲಿಟ್ಟ, ಆಲೂರರ ಬಗ್ಗೆ ಮಳಗಿ ಅವರು ತಾವು ಇರಿಸಿಕೊಂಡಿದ್ದ, ಬೆಳೆಸಿಕೊಂಡಿದ್ದ ಭಕ್ತಿ ಗೌರವಗಳ ಅಭಿವ್ಯಕ್ತಿಗೆ ಅವಕಾಶಕ್ಕಾಗಿ ಕಾಯುತ್ತಿದ್ದ ಸಂದರ್ಭದಲ್ಲಿ ಆಕಾಶವಾಣಿ ಪ್ರಸಾರಕ್ಕಾಗಿ ಆಲೂರರ ಬಗ್ಗೆ ಬರೆಯಬೇಕಾದ ಅವಕಾಶ ತಾನಾಗಿ ಸಿಕ್ಕಿತು. ಇಲ್ಲಿಯೂ ನಿವೇದಕನ ಮತ್ತು ಫ್ಲಾಶ್‌ಬ್ಯಾಕ್ ತಂತ್ರದ ಮೂಲಕ ಈ ಕರ್ನಾಟಕ ಕುಲಪುರೋಹಿತ ಆಲೂರು ವೆಂಕಟರಾಯರ ಜನನ, ಬಾಲ್ಯ, ವಿದ್ಯಾಭ್ಯಾಸ, ನಡೆಸಿದ ವೃತ್ತಿ, ಪ್ರವೃತ್ತಿ, ಅವರ ಕರ್ನಾಟಕತ್ವದ ಚಿಂತನೆಗಳು, ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ವೈಭವ ಶ್ರೀಮಂತಿಕೆಗಳು, ಆಲೂರರ ಕನ್ನಡಪರ ಸಂಘಟನಾಶಕ್ತಿ, ಪತ್ರಿಕೋದ್ಯಮ, ಗ್ರಂಥರಚನೆ, ರಾಷ್ಟ್ರೀಯ ಚಳುವಳಿಯ ಸಂದರ್ಭದಲ್ಲಿ ಆಲೂರರು ವ್ಯಕ್ತಪಡಿಸಿದ ಅಭಿಪ್ರಾಯಗಳು, ನಿಲುವುಗಳು ಇತ್ಯಾದಿ ಎಲ್ಲ ವಿವರಗಳನ್ನು ಬಹಳ ವಿಸ್ತೃತವಾಗಿ ನೀಡಿದ್ದಾರೆ.

ನಿವೇದಕ ಸನ್ನಿವೇಶ ಸಂದರ್ಭಗಳನ್ನು ವಿವರಿಸಿದ ಕೂಡಲೇ, ಆ ಸಂದರ್ಭದಲ್ಲಿ ಆಲೂರರ ಮತ್ತು ಅನ್ಯಪಾತ್ರಗಳ ನಡುವಿನ ಸಂಭಾಷಣೆಗಳು ಒಂದು ನಾಟಕೀಯ ದೃಶ್ಯ ಕಲ್ಪನೆಯನ್ನು ಸೃಷ್ಟಿ ಮಾಡುತ್ತವೆ. ಆಲೂರರೇ ಸ್ವತಃ ಅನೇಕ ಪ್ರಸಂಗಗಳನ್ನು ವಿವರಿಸುತ್ತಾರೆ. ತಮ್ಮ ಅನುಭವಗಳನ್ನು, ಅಭಿಪ್ರಾಯಗಳನ್ನು, ನಡೆದ ಘಟನೆಗಳನ್ನು ನಿವೇದಿಸುತ್ತಾರೆ. ನಿವೇದಕ-ಆಲೂರರ ಮಾತುಗಳಲ್ಲೇ ಕೇಳಬೇಕು ಎಂದು ಹೇಳಿ ಹಿಂದೆ ಸರಿಯುತ್ತಲೇ ಆಲೂರರ ಧ್ವನಿಯಲ್ಲಿ ಮಾತುಗಳು ಕೇಳಿಬರುತ್ತವೆ. ಮಳಗಿಯವರು ಆಲೂರರನ್ನು ಸ್ವತಃ ಕಂಡಿದ್ದುದೇ ಅಲ್ಲದೆ, ಅವರ ಬಗ್ಗೆ ಅನೇಕ ಮಾಹಿತಿಗಳನ್ನು, ವಿವರಗಳನ್ನು ವಿಪುಲವಾಗಿ ಸಂಗ್ರಹಿಸಿದ್ದರ ಜೊತೆಗೆ ಆಲೂರರದೇ ಆದ 'ಸ್ಮೃತಿಗಳು' ಎಂಬ ಆತ್ಮಕಥನ ಮತ್ತಷ್ಟು ವಿಚಾರಗಳನ್ನು ಒದಗಿಸಿಕೊಟ್ಟಿದ್ದರ ಮೂಲಕ ಈ ಶಬ್ದ ಚಿತ್ರ ಒಂದು ಸಮಗ್ರವೂ ಮತ್ತು ಆಲೂರರ ಬದುಕು, ವ್ಯಕ್ತಿತ್ವ, ನಾಡು, ನುಡಿ, ರಾಷ್ಟ್ರೀಯತೆ, ಸ್ವಾತಂತ್ರ್ಯ, ಚಳುವಳಿಗಳು ಭಾರತೀಯತೆ, ಅಗಿನ ಸಂದರ್ಭದ ವಿವರಗಳೂ ಆದ ರಾಜಕೀಯ, ಸಾಮಾಜಿಕ ಸ್ಥಿತ್ಯಂತರಗಳು ಇತ್ಯಾದಿಯಾಗಿ ಅನೇಕ ಪರಿಕಲ್ಪನೆಗಳ ಬಗೆಗಿನ ಅವರ ಚಿಂತನೆಗಳು, ವಿಚಾರಗಳು, ಈ ಒಂದು ಪುಟ್ಟ ಶಬ್ದಚಿತ್ರದಲ್ಲಿ ಅಡಕವಾಗಿ ಕಟ್ಟಿಕೊಟ್ಟಿದ್ದಾರೆ. ವಾಸ್ತವವಾಗಿ ಈ ಶಬ್ದಚಿತ್ರ ಆಲೂರರ ಶತಮಾನೋತ್ಸವ ಆಚರಣೆಯ

ವರ್ಷದಲ್ಲಿ ಬರೆದಿದ್ದು, ಆಲೂರರಗೆ ಸಂದ ಗೌರವ ಸಮರ್ಪಣೆಯಂತಿದೆ ಈ ಶಬ್ದ ಚಿತ್ರ, ಶಬ್ದ ಚಿತ್ರವನ್ನು ಅತ್ಯಂತ ಪರಿಣಾಮಕಾರಿಯಾಗಿ ರೂಪಿಸಿದ್ದಾರೆ.

**ಶ್ರೀರಂಗ–ಪುರುಷಾರ್ಥ**–ಎಂಬ ಎಂಟನೆಯ ಬಾನುಲಿ ನಾಟಕ, ೧೯೮೭ರಂದು ಪ್ರಸಾರವನ್ನು ಕಂಡಿದೆ. ಇದು ಶ್ರೀರಂಗರ 'ಪುರುಷಾರ್ಥ ಎಂಬ ಕಾದಂಬರಿಯ ರೇಡಿಯೋ ನಾಟಕ ರೂಪಾಂತರವಾಗಿದೆ. ಕಾದಂಬರಿ ಪ್ರಕಾರವನ್ನು ಧ್ವನಿ ಮಾಧ್ಯಮಕ್ಕೆ ಅಳವಡಿಸುವುದೇ ಒಂದು ದೊಡ್ಡ ಸವಾಲು. ಅಂಥಾದ್ದರಲ್ಲಿ ಶ್ರೀರಂಗರ ಅತ್ಯಂತ ಸಂಕೀರ್ಣವಾದ ಕಥಾನಕವನ್ನು ಅದೂ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿನ ಸನ್ನಿವೇಶಗಳನ್ನು, ಘಟನೆಗಳನ್ನು ನಿರೂಪಿಸುವುದು ಮತ್ತೂ ಕ್ಲಿಷ್ಟವಾದ ಸಮಸ್ಯೆಯೇ ಆಗಿರುವಾಗ ಮಳಗಿಯವರು ಅದನ್ನು ಅದ್ಭುತವಾದ ರೀತಿಯಲ್ಲಿ ಈ ಮಾಧ್ಯಮಕ್ಕೆ ರೂಪಕವಾಗಿ ಅಳವಡಿಸಿದ್ದಾರೆ. ೧೯೨೦ರಿಂದ ೧೯೪೭ರವರೆಗಿನ ಕಥೆ. ಈ ಕಥೆಯಲ್ಲಿ ಪ್ರಮುಖವಾಗಿ ನಾಲ್ಕು ಪಾತ್ರಗಳು ಕಾಣಿಸಿಕೊಳ್ಳುತ್ತವೆ. ಈ ನಾಲ್ಕೂ ಜನ ಆಪ್ತ ಸ್ನೇಹಿತರಾದರೂ ಅವರ ಆಲೋಚನೆಗಳು, ತಾತ್ವಿಕ ನಂಬಿಕೆಗಳೂ ಭಿನ್ನಭಿನ್ನವಾಗಿವೆ. ಶ್ರೀರಂಗರು ಈ ಪಾತ್ರಗಳನ್ನು ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ನಾಲ್ಕು ಪುರುಷಾರ್ಥಗಳನ್ನು ಪ್ರತಿನಿಧಿಸುವಂತೆ ಸೃಷ್ಟಿಸಿದ್ದಾರೆ. ಒಬ್ಬೊಬ್ಬರದೂ ಒಂದು ನಿಲುವು ; ಒಬ್ಬೊಬ್ಬರಿಗೂ ಒಂದೊಂದರಲ್ಲಿ ಆಸ್ತಿ. ಈ ರೂಪಕದ ಹಿನ್ನೆಲೆಯೆಂದರೆ, ೧೯೪೭ರ ಜೂನ್ ೩ನೆಯ ದಿನಾಂಕದಂದು ಬ್ರಿಟಿಷ್ ಸರಕಾರ, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ಈ ಮೂರೂ ಪಕ್ಷಗಳು ಮಾಡಿಕೊಂಡ ಒಡಂಬಡಿಕೆಯ ಮೇರೆಗೆ ೧೯೪೭ ಆಗಸ್ಟ್ ಹದಿನೈದರಂದು ಭಾರತ ಒಡೆದು ಹೋಳಾಗುತ್ತಲೇ ಸ್ವಾತಂತ್ರ್ಯ ಪಡೆಯಿತು. ಅಧಿಕಾರ ಎರಡೂ ಕಡೆಗೆ ಹಂಚಿಕೆಯಾಯಿತು. ಪರಿಣಾಮ ಭಯಂಕರವಾಗಿತ್ತು. ಸೌಹಾರ್ದ, ಸಂತೋಷ, ಸಂಭ್ರಮಗಳೊಂದಿಗೆ ಆಚರಿಸಿಕೊಳ್ಳಬೇಕಿದ್ದ ಸ್ವಾತಂತ್ರ್ಯದ ಹಬ್ಬದ ಸಂದರ್ಭದಲ್ಲಿಯೇ ಮತೀಯ ಗಲಭೆಗಳು, ಮಾರಣಹೋಮಗಳು ನಡೆದಿದ್ದವು. ನಿರೀಕ್ಷಿಸಿದ್ದಕ್ಕಿಂತ ಭಿನ್ನವಾದ ಪರಿಣಾಮಗಳಿಂದ ಗಾಂಧೀಜಿಯವರೂ ಆಘಾತಕ್ಕೆ ಒಳಗಾಗಿದ್ದರು. ಇಂತಹ ಸನ್ನಿವೇಶ, ಸಂದರ್ಭ ಘಟನೆಗಳಿಗೆ ಸಾಕ್ಷಿಯಾಗಿಯೂ, ಸ್ವತಃ ಅವುಗಳ ಭಾಗವಾಗಿಯೂ ಇದ್ದ ಈ ನಾಲ್ಕು ಪಾತ್ರಗಳ ಮೂಲಕ ಶ್ರೀರಂಗರು, ಸ್ವಾತಂತ್ರ್ಯ, ದೇಶಪ್ರೇಮ, ಆದರ್ಶಗಳು, ಮೌಲ್ಯಗಳು–ಇತ್ಯಾದಿಗಳನ್ನು ಈ ಸಂದರ್ಭದ ಹಿನ್ನೆಲೆಯಲ್ಲಿ ವ್ಯಂಗ್ಯ, ವಿಡಂಬನೆಯ ಧಾಟಿಯಲ್ಲಿ ವಿಮರ್ಶೆಗೆ ವಿಶ್ಲೇಷಣೆಗೆ ತೊಡಗುತ್ತಾರೆ. ಕೇಂದ್ರ ಪಾತ್ರವಾದ ಮಾಧವ, ಗಾಂಧಿವಾದಿ, ಆದರ್ಶಳಿಗೆ ಮೌಲ್ಯಗಳಿಗೆ ತೆತ್ತುಕೊಂಡವನು. ಕಡೆಗೆ ಅವನ ಬದುಕು ದುರಂತದಲ್ಲಿ ಪರ್ಯವಸಾನವಾಗುತ್ತದೆ. ಆದರೆ ಇವನ ಉಳಿದ ಮೂವರು ಸ್ನೇಹಿತರು, ಅವರಲ್ಲಿ ಒಬ್ಬ ಶ್ರೀಧರ ಎನ್ನುವವನು ಮಾಧವನ ಆತ್ಮೀಯ ಮಿತ್ರ, ಅವನ ಬಗ್ಗೆ ತೀರಾ ಕಳಕಳಿ ಉಳ್ಳವನು, ಸಮತಾವಾದದತ್ತ ಒಲಿದಿದ್ದವನು, ಮತ್ತೊಬ್ಬ ಅನಂತ ಚುರುಕು ಬುದ್ಧಿಯ ವಾದ ಚತುರ, ಸ್ವಾರ್ಥಸಾಧಕ, ಮಗದೊಬ್ಬ ಹನುಮಂತ ರಾಜಕಾರಣಿಯೊಬ್ಬನಿಗೆ ಇರಬೇಕಾದ ಎಲ್ಲ ಚಾಣಾಕ್ಷ ಗುಣಗಳೂ,

ಗೋಸುಂಬಿತನ ಎಲ್ಲವುಗಳಲ್ಲಿ ಬಹಳ ನಿಷ್ಣಾತನಾಗಿದ್ದವನು, ವಿನೋದಪ್ರಿಯತೆ ಸಮಯ ಸಾಧಕ ಚಾತುರ್ಯಗಳನ್ನು ಚೆನ್ನಾಗಿ ರೂಢಿಸಿಕೊಂಡಿದ್ದವನು.

ಈ ಬಾನುಲಿ ರೂಪಕ, ೧೯೨೦ರಿಂದ ೧೯೪೭ರವರೆಗಿನ ಎಲ್ಲ ಚಳುವಳಿಗಳಲ್ಲಿ, ತನ್ನ ಸ್ನೇಹಿತರೊಂದಿಗೆ ಸಕ್ರಿಯವಾಗಿ ಭಾಗವಹಿಸಿದ. 'ಧರ್ಮ' ಪ್ರತಿನಿಧಿಸುವ ಮಾಧವ ಹೋರಾಟದ ಫಲವಾದ ಸ್ವಾತಂತ್ರ್ಯೋತ್ಸವದ ಸಂಭ್ರಮವನ್ನು, ರೋಗಪೀಡಿತ ಸ್ಥಿತಿಯಲ್ಲಿಯೂ ಅನುಭವಿಸುತ್ತಾ ಸ್ವಾತಂತ್ರ್ಯದ ಭಾಗ್ಯ ಲಭಿಸಿದ್ದಕ್ಕಾಗಿ ಧನ್ಯತೆಯ ಭಾವವನ್ನು ತಲುಪುತ್ತಾನೆ. ಹಾಗೆಯೇ Nostalgic ಆಗಿ ೧೯೨೦ರಲ್ಲಿ ತಾವು ಗೆಳೆಯರು ಇನ್ನೂ ವಿದ್ಯಾರ್ಥಿ ಸ್ಥಿತಿಯಲ್ಲಿ ಇರುವಾಗ ಅಂದಿನ ರಾಜಕೀಯ ಚಳುವಳಿಗಳನ್ನು, ಚಳುವಳಿಗಳ ಭಾಗವಾಗಿದ್ದ ಗಾಂಧಿ, ತಿಳಕರು ಮೊದಲಾದವರ ರಾಜಕೀಯ ನಿಲುವುಗಳನ್ನು, ಅಂದು ಘಟಿಸಿದ ಘಟನೆಗಳ ಪರಿಣಾಮಗಳನ್ನು ಮೆಲುಕು ಹಾಕುತ್ತಾರೆ. ಫ್ಲಾಶ್‌ಬ್ಯಾಕ್‌ನಲ್ಲಿ ಅವರು ಭಾಗವಹಿಸಿದ ಹೋರಾಟದ ಅನುಭವಗಳನ್ನು ಹಂಚಿಕೊಳ್ಳುತ್ತಾ ಅವರವರ ರಾಜಕೀಯ ವಿಚಾರಗಳನ್ನು ವ್ಯಕ್ತಪಡಿಸುತ್ತಾರೆ. ಮಾಧವನಿಗೆ ಇದ್ದ ಗಾಂಧಿ ನಿಷ್ಠೆ, ಅಹಿಂಸೆ, ಸತ್ಯಾಗ್ರಹ ಅಸ್ಪೃಶ್ಯತೆ ಇತ್ಯಾದಿಗಳ ಬಗೆಗಿನ ಗಾಂಧಿ ನಿಲುವುಗಳನ್ನು ವ್ಯಂಗ್ಯ, ವಿಡಂಬನೆಗಳಿಗೆ ಒಳಗಾಗಿಸುತ್ತಾರೆ. ಅವರವರ  ನಂಬಿಕೆಯ ತತ್ವಗಳನ್ನು ಪರಸ್ಪರ ಟೀಕಿಸುತ್ತಾರೆ, ಲೇವಡಿ ಮಾಡುತ್ತಾರೆ. ಮಾಧವನ ಹೊರತು ಆ ಮೂವರು ಗೆಳೆಯರೂ ಬದುಕನ್ನು ಪ್ರಾಕ್ಟಿಕಲ್ ಆಗಿ ನೋಡುತ್ತಾರೆ. ಮಾಧವ ದೇಶಸೇವೆಗೆಂದು ಕಾಲೇಜು ಬಿಟ್ಟರೆ, ಶ್ರೀಧರ, ಹಮ್ಮೂ ಬದುಕಿಗೆ ಬೇರೆ ಬೇರೆ ಪರ್ಯಾಯಗಳನ್ನು ಕಂಡುಕೊಳ್ಳಲು ಕಾಲೇಜು ಬಿಡುವುದೋ, ಅಥವಾ ಮತ್ಯಾವುದಾದರೂ ಹಾದಿ ಹಿಡಿಯುವುದೋ ಎಂದು ಯೋಚಿಸುತ್ತಾರೆ, ಶ್ರೀಧರನಿಗಂತೂ ಮಹಾತ್ಮಾಗಾಂಧಿಯ ಉದ್ದೇಶಗಳ ಜೊತೆಗೆ ಕೈ ಜೋಡಿಸಬೇಕೆಂಬ ಆಸೆಯಿಂದ ಚಳುವಳಿಗಳಿಗೆ ಧುಮುಕುವುದಿಲ್ಲ.

೧೬-೧೭ ವಯಸ್ಸಿನ ಅವಧಿಯಲ್ಲಿ ಸ್ವಾತಂತ್ರ್ಯ ಚಳುವಳಿಗೆ ಧುಮುಕಿದವರು, ೪೬-೪೭ರ ಪ್ರಾಯದಷ್ಟು ಹೊತ್ತಿಗೆ ಸ್ವಾತಂತ್ರ್ಯವನ್ನು ಲಭ್ಯವಾಗಿಸಿಕೊಂಡರಾದರೂ ಈ ನಾಲ್ಕೂ ಗೆಳೆಯರ ಬದುಕುಗಳು ಬೇರೆ ಬೇರೆ ರೀತಿಯಲ್ಲಿ ರೂಪುಗೊಂಡವು. ಅತಿಯಾದ ಆದರ್ಶಗಳು, ಮೌಲ್ಯಗಳು, ದೇಶಪ್ರೇಮ, ಗಾಂಧಿ ನಿಷ್ಠೆಗಳಿಗೆ ತೆತ್ತುಕೊಂಡ ಮಾಧವನಿಗೆ ದೊರೆತದ್ದು, ರೋಗರುಜಿನಗಳು, ಕಿತ್ತು ತಿನ್ನುವ ಬಡತನ ! ಅನಂತ ಐಎಎಸ್ ಪಾಸು ಮಾಡಿ ದೊಡ್ಡ ದೊಡ್ಡ ಅಧಿಕಾರ ಸ್ಥಾನಗಳಲ್ಲಿ ಮೆರೆದ, ಹಮ್ಮೂ ರಾಜಕೀಯ ಸೇರಿ ಶಾಸಕನಾದ, ಶ್ರೀಧರ ಸಮಾಜವಾದಿ ತತ್ವಗಳನ್ನು ನಂಬಿದವನಾಗಿದ್ದರಿಂದ ಮಾಧವನ ಪರಿಸ್ಥಿತಿಗಳಿಗೆ ಸ್ಪಂದಿಸುತ್ತಾ, ಅವನ ಸಂಕಟಗಳ ಬಗ್ಗೆ ಕರುಣೆ, ಅನುಕಂಪಗಳನ್ನು ತೋರಿದ. ಇಪ್ಪತ್ತು ವರ್ಷಗಳ ನಂತರ, ಸ್ವಾತಂತ್ರ್ಯೋತ್ಸವದ ದಿನ ತಮ್ಮ ಹಳೆಯ ಗೆಳೆಯ, ಆದರ್ಶವಾದಿ ಮಾಧವನನ್ನು ಅವನ ಕನಸು ನನಸಾಗಿರುವ ಸಂದರ್ಭದಲ್ಲಿ ಅಭಿನಂದಿಸಿ ಸಂತೋಷ ಹಂಚಿಕೊಳ್ಳಲು ಒತ್ತಾಯದಿಂದಲೋ, ಸ್ವಸಂತೋಷದಿಂದಲೋ ಬಂದರಾದರೂ, ಅವರಿಗೆ ಎದುರಾದದ್ದು ಜೀವಂತ ಮಾಧವನಲ್ಲ. ಕೈಲಿ ಧ್ವಜ ಹಿಡಿದೇ ದೀರ್ಘ ನಿದ್ರೆಗೆ ಸಂದಿದ್ದ ಸ್ಥಿತಿಯಲ್ಲಿನ ಹೆಣವನ್ನು!

ನಾಟಕದ ಇಂಥ ಸಂಕೀರ್ಣ ವಸ್ತುವನ್ನು ಅತ್ಯಂತ ಸಮರ್ಥವಾಗಿ ನಿರ್ವಹಿಸಿದ್ದಾರೆ. ದೃಶ್ಯಗಳು ೧೯೨೦-೧೯೪೭ರ ಕಾಲಘಟ್ಟಗಳಿಗೆ ಶಿಫ್ಟ್ ಆಗುತ್ತಲೇ ಚಲಿಸುತ್ತವೆ. ಗಾಂಧಿಯ ಎಷ್ಟೋ ಚಳುವಳಿಗಳು ವ್ಯರ್ಥ ಮತ್ತು ಅರ್ಥಹೀನ ಎನ್ನುವ ಧ್ವನಿ ಹೊಮ್ಮುತ್ತದೆ. ಮಾಧವ ಪ್ರಾಣತ್ಯಾಗ ಮಾಡಿದ, ಆದರೆ ಗೆಳೆಯರಾದ ಹಮ್ಮೂ ಅನಂತರು ಗವರ್ನರ್ ಆಗುವ ಚೀಫ್ ಸೆಕ್ರೆಟರಿ ಆಗುವ, ಕನಸುಗಳಲ್ಲಿ ಸಂಭ್ರಮಿಸುವ ದೃಶ್ಯವೇ ಇಡೀ ನಾಟಕದ ವ್ಯಂಗ್ಯವಾಗಿದೆ.

ಒಂಬತ್ತನೆಯದಾದ **'ಏಕ ಕುಟುಂಬ'** ರೂಪಕ ಒಂದು ಕುಟುಂಬದ ಆಗುಹೋಗುಗಳ ಕಥೆಯಾಗಿದೆ. ಅವಿಭಕ್ತ ಕುಟುಂಬದ ಪ್ರಯೋಜನಗಳು, ವಿಭಕ್ತ ಕುಟುಂಬದ ಸಮಸ್ಯೆಗಳು-ಇವುಗಳನ್ನು ಎತ್ತಿ ತೋರಿಸುವ ಪ್ರಯತ್ನವೇ ಈ ನಾಟಕ. ಒಂದು ಕುಟುಂಬದ ಅಣ್ಣ ತಮ್ಮಂದಿರು, ತಂದೆಯ ಸಾವಿನ ನಂತರ, ಅಣ್ಣ-ತಮ್ಮಂದಿರ ಹೆಂಡಂದಿರ ನಡುವೆ ಒಂದಲ್ಲ ಒಂದು ಕಾರಣಕ್ಕೆ ವಿರಸ ಉಂಟಾಗಿ, ಬೇರೆ ಬೇರೆಯಾಗಿ ಹಚಿರ್ಹೋಗಿ ಸಂಸಾರ ನಡೆಸಬೇಕಾಗಿ ಬರುತ್ತದೆ. ಆದರೆ ಕ್ರಮೇಣ, ಒಬ್ಬೊಬ್ಬರ ಮನೆಯಲ್ಲೂ ಕಷ್ಟಗಳೂ ಸಮಸ್ಯೆಗಳೂ ಉದ್ಭವಿಸಿ, ನಿಭಾಯಿಸಲಾಗದೆ ಸಂಕಟ ಪಡುವಂತಾಗುತ್ತದೆ. ಜಡ್ಡು ಹಿಡಿದು ಮಲಗಿದ ಲಚ್ಚಪ್ಪನ ಹೆಂಡತಿ, ಬಾಣಂತಿಯಾಗಿರುವ ರಾಮಣ್ಣನ ಹೆಂಡತಿ, - ಎರಡೂ ಮನೆಗಳಲ್ಲಿ ಸಹಾಯಕ್ಕೆ, ಸಮಯಕ್ಕೆ ಯಾರೂ ಇಲ್ಲದಂತಾಗಿ ಕಷ್ಟ ಅನುಭವಿಸಿದ ಮೇಲೆ, ಪಾಡು ಪಟ್ಟ ಮೇಲೆ ಒಂದಾಗಿ ಬಾಳುವುದರ ಸುಖದ ಅರ್ಥ ತಿಳಿದುಬಂದಾಗ, ಪೂರ್ವ ವೈರ, ವಿರಸಗಳನ್ನು ಮರೆತು, ಗಂಡಸರು ಅಷ್ಟೇ ಅಲ್ಲ ಹೆಂಗಸರೂ ಒಂದಾಗುತ್ತಾರೆ. ಕೂಡಿ ಬಾಳುವುದರಲ್ಲಿ ಸುಖವಿದೆ ಎಂಬ ಸಂದೇಶವನ್ನು ಸಾರುವ ಈ ನಾಟಕ ಅತ್ಯಂತ ಸರಳವಾಗಿದೆ. ಆಪತ್ಕಾಲದಲ್ಲಿ, ಸಂಕಷ್ಟಗಳಲ್ಲಿ ಒಬ್ಬರಿಗೊಬ್ಬರು ನೆರವಾಗಲು, ಸುಖ ಸಂತೋಷಗಳಲ್ಲಿ ಬದುಕಲು ಏಕ ಕುಟುಂಬ ಅಥವಾ ಅವಿಭಕ್ತ ಕುಟುಂಬವೇ ಸರಿಯಾದ ಸಮರ್ಥವಾದ ಹಾದಿ ಎನ್ನುವುದು ಲೋಕಾನುಭವದ ಮಾತಾಗಿದೆ.

ಇನ್ನು ಕಡೆಯದಾದ **'ಪ್ರೋಗ್ರಾಂ ಪುಂಗವ'** ಎನ್ನುವ ನಾಟಕವನ್ನು ಲೇಖಕರೇ ಅಸಂಬದ್ಧ ಹುಚ್ಚಾಟ, ಹುಚ್ಚು ನಗೆಯೇ ಇದರ ಪರಮಗುರಿ ಎಂದು ಗುರುತಿಸುತ್ತಾರೆ. ಈ ನಾಟಕ ಅಥವಾ ರೂಪಕದಲ್ಲಿನ ಹೆಸರುಗಳೇ ಮೊದಲಿಗೆ ವಿಚಿತ್ರವೆನಿಸಿವೆ. 'ಶಾಪಂ' ಎಂಬ ರಂಗಮಂದಿರ, ನಾಯಾರ್‌ಖಾನ್ ಎಂಬ ಗವಾಯಿ, ಟ್ರಕ್ಕುಗಟ್ಟಲೆ ವಾದ್ಯಗಳು, ಭರ್ಜರಿ ಪ್ರಚಾರ, ಟಿಕೆಟಿಗಾಗಿ ನೂಕುನುಗ್ಗಲು, ಗಲಭೆ ಏನೇನೋ ನಿರೀಕ್ಷೆಗಳನ್ನು ಇಟ್ಟುಕೊಂಡು ಬಂದವರಿಗೆ ಟಿಕೇಟು ದೊರೆಯದೆ ಹತಾಶೆ, ನಿರಾಶೆ ಎಲ್ಲವೂ ಅಣಿಯಾಗಿ, ಹಾಡುಗಾರಿಕೆಗೆ ವೇದಿಕೆ ಸಜ್ಜಾಗಿ ಕಾರ್ಯನಿರ್ವಾಹಕನಿಂದ ಶ್ರೋತೃಗಳಿಗೆ, ಸಂಗೀತ ಶಾರ್ದೂಲರ ಬಗೆಗೆ ಹೊಗಳಿಕೆಯ ಸುರಿಮಳೆ, ಹೊಸ ಹೊಸ ರಾಗಾಲಾಪದ ಭರವಸೆಗಳು ಮುಗಿದ ಮೇಲೆ ಸಂಗೀತ ಶಾರ್ದೂಲರಿಂದಲೇ ತಾವು ಹಾಡುವ ರಾಗಗಳ ಬಗೆಗೆ ಅಸಂಬದ್ಧ ಮಾತುಗಳು, ಮಿಯಾಮಲ್ಲಾರ್, ಹಯ ಹಯವಂತಿ, ವೃಕಧ್ವನಿ, ಹಿಂದೋಳ ಮುಂದೋಳ, ಯಮನ ಕಲ್ಯಾಣ-ಇತ್ಯಾದಿ ಅಸಂಬದ್ಧ ರಾಗಗಳನ್ನು

ಹಾಡಿ ಶ್ರೋತೃಗಳನ್ನು ಮರಣಾಸನ್ನ ಸ್ಥಿತಿಗೆ ಕೊಂಡೊಯ್ಯುವ ಸ್ಥಿತಿಯೇ ಇಡೀ ನಾಟಕದ ವಸ್ತುದ್ರವ್ಯ, ವಿಕೃತ ಹಾಡುಗಾರಿಕೆ, ಅಸಂಬದ್ಧ ರಾಗಸಂಯೋಜನೆ ಇವೆಲ್ಲವೂ ಹುಚ್ಚಾಟದ ಅಭಿವ್ಯಕ್ತಿಗಳೇ ಆಗಿರುವುದರಿಂದ ಇದನ್ನು ಅಸಂಬದ್ಧ ಹುಚ್ಚಾಟವೆಂದೇ ಹೆಸರಿಸಿದ್ದಾರೆ.

ಮಳಗಿಯವರಿಗೆ ಮಾಧ್ಯಮಗಳ ಅರಿವಿದೆ, ರಂಗನಾಟಕ, ರೇಡಿಯೋ ನಾಟಕಗಳ ಸ್ವರೂಪ ಲಕ್ಷಣಗಳ ಸೂಕ್ಷ್ಮಾನುಭವ ಇರುವುದರ ಮೂಲಕ ತಾವು ಬರೆದು ಪ್ರಸಾರಕ್ಕೆ ಒಳಪಡಿಸಿದ ಈ ಎಲ್ಲ ರೂಪಕಗಳು, ನಾಟಕಗಳು, ಶಬ್ದಚಿತ್ರಗಳು ಧಾರವಾಡ ಮತ್ತು ಬೆಂಗಳೂರು ಆಕಾಶವಾಣಿ ಕೇಂದ್ರಗಳಿಂದ ಪ್ರಸಾರವಾಗಿ ಒಳ್ಳೆಯ ಪ್ರತಿಕ್ರಿಯೆ ಪಡೆದಿವೆ.

**ಬಾಳ ದಾರಿಯಲಿ :** ಪ್ರೊ. ಮಳಗಿಯವರು ಬೇರೆ ಬೇರೆ ಕೃತಿಗಳನ್ನು ಬರೆದಿರುವವರಾದರೂ 'ಬಾಳದಾರಿಯಲಿ' ಎಂಬುದೊಂದೇ ಕವನ ಸಂಕಲನ ಅವರ ಕಾವ್ಯಪ್ರತಿಭೆಗೆ ಸಾಕ್ಷಿಯಾಗಿದೆ. ಸಾಂದರ್ಭಿಕವಾಗಿ ಕವಿತೆಗಳನ್ನು ಬರೆದರೇ ಹೊರತು, ಕಾವ್ಯವನ್ನು ಪ್ರಮುಖ ಮಾಧ್ಯಮವನ್ನಾಗಿ ಮಾಡಿಕೊಳ್ಳಲಿಲ್ಲ. ಈ ಸಂಕಲನವೂ ಕೂಡಾ ದಿ. ಡಾ. ರಂ.ಶ್ರೀ. ಮುಗಳಿಯವರ ಜನ್ಮಶತಮಾನೋತ್ಸವದ ನೆನಪಿನ ಕಾಣಿಕೆಯಾಗಿ ೨೦೦೫ರಲ್ಲಿ ಪ್ರಕಟಗೊಂಡಿದೆಯಾದರೂ ಇದರಲ್ಲಿ ತಾವು ಬೇಂದ್ರೆ ಅವರ ಗೆಳೆಯರ ಗುಂಪಿನ ಸದಸ್ಯರಾಗಿದ್ದು, ಆ ಸಂದರ್ಭದಲ್ಲಿ ಅವರು ಹತ್ತಿರದಿಂದ ಗೌರವದಿಂದ ಕಂಡ ಹಿರಿಯ ಕವಿಗಳನೇಕರ ನೆನಪಿನಲ್ಲಿ ಬರೆದು ಕೃತಜ್ಞತೆ ಸಲ್ಲಿಸುವ ರೀತಿಯೂ ಇದಾಗಿದೆ. ಒಂದೊಂದು ಕವಿತೆಯೂ ಒಂದು ನಿರ್ದಿಷ್ಟ ಸಂದರ್ಭದ ಹಿನ್ನೆಲೆಯಲ್ಲಿ ಬರೆದುದಾಗಿರುವುದರಿಂದ ಇವುಗಳನ್ನು ಕಾಲಬದ್ಧ ಕವಿತೆಗಳೆಂದು ಕರೆದಿದ್ದಾರೆ. ೧೯೩೧ರಿಂದ ೨೦ರವರೆಗೆ ಬರೆದ ಒಟ್ಟು ೩೪ ಕವಿತೆಗಳ ಸಂಕಲನ ಇದಾಗಿದೆ. ಪ್ರತಿಯೊಂದು ಕೃತಿಯಲ್ಲೂ ಮಳಗಿಯವರು 'ಮೊದಲ ಮಾತಾಗಿ' ತಮ್ಮ ಬರಹಗಳ, ಸನ್ನಿವೇಶ, ಅಲ್ಲಿನ ವಸ್ತು ಯಾಕೆ ಬರೆದೆ ಎಂಬುದಕ್ಕೆ ಸಮರ್ಥನೆ–ಇತ್ಯಾದಿಗಳನ್ನು ಕೊಡುವುದರ ಕಾರಣದಿಂದ ಸುಲಭವಾಗಿ ಓದುಗರ ಗ್ರಹಿಕೆಗೆ ದಕ್ಕುತ್ತದೆ. ಈ ಸಂಕಲನದ ಕವಿತೆಗಳನ್ನು 'ಕಾಲಬದ್ಧ ಕವಿತೆ'ಗಳೆಂದು ಕರೆದದ್ದೇಕೆ ಎಂಬುದಕ್ಕೆ ಈ ರೀತಿ ವಿವರಣೆ ನೀಡುತ್ತಾರೆ. 'ಬಾಳದಾರಿಯಲಿ' ಎಂಬ ನನ್ನ ಕವಿತಾ ಸಂಕಲನವನ್ನು 'ಕಾಲಬದ್ಧ' ಎಂದು ಶೀರ್ಷಿಕೆಯ ಬುಡದಲ್ಲಿ ಕಾಣಿಸಿದ್ದೇನೆ. ಈ ಕವಿತೆಗಳು ಪ್ರತಿಯೊಂದೂ ಯಾವ ವರ್ಷ ಪ್ರಕಟಗೊಂಡಿತೆಂಬುದನ್ನೂ ಆಯಾ ಕವಿತೆಯ ಎಡಬದಿಯಲ್ಲಿ ಉಲ್ಲೇಖಿಸಿದ್ದೇನೆ. ಇದಕ್ಕೆ ಕಾರಣವೆಂದರೆ–ಆಯಾ ಕವಿತೆಯ ಹುಟ್ಟಿಗೆ ಆಯಾ ವರ್ಷ ನಡೆದ ಯಾವೊಂದು ಘಟನೆಯ ಅನುಭವವು ಹಿನ್ನೆಲೆಯಾಗಿತ್ತೆಂದು ಸೂಚಿಸುವುದಾಗಿದೆ– ಎಂದು ತಮ್ಮ ಕವಿತೆಗಳ ಹಿನ್ನೆಲೆ ಜೊತೆಗೆ ಕವಿತೆಯ ವಸ್ತು ನಿರ್ದೇಶನವೂ ಸಾಧ್ಯವಾಗಿದೆ.

ಅವರೇ ಹೆಸರಿಸಿರುವ ಕವಿತೆಗಳಲ್ಲಿ ಒಂದಾದ 'ಮಗು' ಆಲೂರು ವೆಂಕಟರಾಯರ ಮನೆಯಲ್ಲಿ ಇದ್ದಾಗ ವಿದ್ಯಾರ್ಥಿ ದೆಸೆಯಲ್ಲಿರುವಾಗ, ತಾವು ಪ್ರತ್ಯಕ್ಷವಾಗಿ ಕಂಡ

ಅನುಭವವನ್ನೇ ಕವಿತೆಯಾಗಿಸಿ, ಎ.ಆರ್.ಕೃ. ಅವರಿಂದ ಮತ್ತು ಬೇರೆ ಬೇರೆಯವರಿಂದ ಮೆಚ್ಚಿಗೆ ಪಡೆದು, ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾದ ಸಂಗತಿಯನ್ನು ನೆನಪಿಸಿಕೊಳ್ಳುತ್ತಾರೆ.

**'ಮೌನ ಸಪ್ತಾಹ'** ಕವಿತೆಗೆ ಹಿನ್ನೆಲೆ, ಗೆಳೆಯರ ಗುಂಪಿನ ಏಳು ಮಂದಿ ಸದಸ್ಯರು ಬೇರೆ ಬೇರೆ ೩ ಎಡೆಗಳಲ್ಲಿ ಮೌನ ಸಪ್ತಾಹ ಆಚರಿಸಿದ ನೆನಪಿನ ಚಿತ್ರಣವಾಗಿದೆ. ಅದೇ ರೀತಿಯಲ್ಲಿ "ಪುನರ್ಮಿಲನದ ನಂತರ" ಶಾಕುಂತಲ ನಾಟಕ ಪಾಠ ಮಾಡಿದ ಅನುಭವವಿದ್ದರೆ, 'ಶ್ರಮದಾನ ಮಾರ್ಗ'ಕ್ಕೆ ಅಧ್ಯಾಪಕರು ವಿದ್ಯಾರ್ಥಿಗಳು ಸೇರಿ ಗುದ್ದಲಿ ಸನಿಕೆ ಹಿಡಿದು ಶ್ರಮದಾನ ಮಾಡಿದ ಪ್ರಸಂಗದ ವಿವರಣೆ ಇದೆ. ಹೀಗೆ ಹಲವಾರು ಕವಿತೆಗಳು ಸನ್ನಿವೇಶ ಸಂದರ್ಭಗಳ ನೆನಪಿನ ವಿವರಣೆಯನ್ನು ಒಳಗೊಂಡಿದ್ದರೆ, ಬೇಂದ್ರೆ, ತೀ.ನಂ.ಶ್ರೀ., ರಾಜರತ್ನಂ, ಜವಾಹರ, ರಂ.ಶ್ರೀ.ಮುಗುಳಿ, ಅರವಿಂದ ಗೆಳೆಯ ಹೇಮಂತ–ಮುಂತಾದವರ ಪ್ರತಿಭೆ, ಪಾಂಡಿತ್ಯ ವರ್ಚಸ್ವಿ ವ್ಯಕ್ತಿತ್ವ ಸ್ನೇಹ ಸಂಬಂಧಗಳ, ಪ್ರೀತಿಯ ಅನಾವರಣದ ಪ್ರಯತ್ನವನ್ನು ಕಾಣುತ್ತೇವೆ. ಮುಳಗಿಯವರ ಮೇಷ್ಟ್ರುತನದ ಗಾಢ ಅನುಭವಗಳೇ ಅವರ ಕೃತಿಗಳ ರಚನೆಗೆ ಅದ್ಭುತ ಪ್ರಚೋದನೆ, ಪ್ರೇರಣೆಗಳಾಗಿವೆ. ಮಳಗಿಯವರಲ್ಲಿ ಅದ್ಭುತ ಕಾವ್ಯಸೃಜನ ಸಾಮರ್ಥ್ಯವಿದೆಯಾದರೂ ಯಾಕೋ ಏನೋ ಅದಕ್ಕಿಂತ ಬೇರೆ ಬೇರೆ ಶಿಸ್ತುಗಳ ಕಡೆ ಮುಖ ಮಾಡಿಬಿಟ್ಟರು. ನಾದಲಯಭಾವ ಸಂಯೋಜನೆಯ ಸುಂದರ ಅಭಿವ್ಯಕ್ತಿಯನ್ನು ಸಾಧಿಸಿಕೊಂಡಿರುವುದಕ್ಕೆ ಹಲವಾರು ಕವಿತೆಗಳು ನಿದರ್ಶನಗಳಾಗಿವೆ.

ಮೊಲೆಯುಂಡು ಪ್ರಶಾಂತವಾಗಿ ನಿದ್ದೆಗೆ ಸಂದ ಮಗುವನ್ನು ನೋಡ ನೋಡುತ್ತಿದ್ದಂತೆಯೇ ಕವಿಮನಸ್ಸು ಪ್ರಫುಲ್ಲಿತವಾಗಿ, ಮಗುವಿನ ಮುಗ್ಧತೆ, ಮನದ ಶುದ್ಧತೆ, ಮುಗುಳುನಗೆ ಇವುಗಳ ಬಗ್ಗೆ ಚಿಂತಿಸುತ್ತ–ಮಗುವಿನ ಈ ಎಲ್ಲ ಸ್ಥಿತಿಗಳ ಮರ್ಮವನ್ನು ಯಾರಿಗಾದರೂ ಅರಿಯಲು ಸಾಧ್ಯವೇ ಎಂದು ಬೆರಗಿನಿಂದ ಪ್ರಶ್ನಿಸಿಕೊಳ್ಳುತ್ತಾರೆ. 'ಅಕ್ಕ ಮಡಿದಳೇ !' ಸೋದರಿಯ ಸಾವಿನ ದುರಂತದ ಬಗ್ಗೆ ವಿಷಾದ ಗೀತೆಯಾದರೆ, ದೇವ, ಮನ್ನಿಸು ಕವಿತೆ, ನಿಸರ್ಗದಲ್ಲಿನ ಲತೆ, ಅರಳು, ಅಲೆಗಳು ನಗುವನ್ನು ಸ್ವಭಾವವಾಗಿ ರೂಢಿಸಿಕೊಂಡಿರುವಾಗ ತನಗೆ ಮಾತ್ರ ನಗಲು ಸಾಧ್ಯವಾಗುತ್ತಿಲ್ಲವಲ್ಲ, ಜಗತ್ತಿನ ದನಿಯೊಂದಿಗೆ ತನ್ನ ದನಿಯನ್ನು ಬೆರೆಸಲಾಗುತ್ತಿಲ್ಲವಲ್ಲ ಎಂಬ ಸಂಕಟದೊಂದಿಗೆ, ತನ್ನ ಈ ಸ್ಥಿತಿಗೆ ಭಗವಂತನೇ ಕಾರಣನೇನೋ ಎನಿಸುತ್ತದೆಯಾದರೂ, ಅವನಲ್ಲಿ ಕ್ಷಮೆಯಾಚನೆಗೆ ಮುಂದಾಗುತ್ತಿರುವುದನ್ನು ಕಾಣಿಸಿದ್ದಾರೆ.

ಸುಂದರ ಕೋಮಲ ಭಾವಗಳ ನಿರೂಪಣೆಗೆ ನಲ್ಲೆಯ ಕೋಪ ಕವಿತೆಯ ಈ ಸಾಲುಗಳನ್ನು ಗಮನಿಸಬಹುದು.

ನಲ್ಲೆಯನ್ನು ನಲ್ಲ, ಪರಮೆಯಾಗಿ, ಸುಳಿಗಾಳಿಯಗಿ ಬಂದು ಸ್ವಾಗತವನ್ನು ಈಯಬೇಕೆಂದು, ನಗಬೇಕೆಂದು ಬಯಸಿದಾಗ, ನಲ್ಲೆ ನೀಡುವ ಉತ್ತರ ಹೀಗಿದೆ :

"ಪರಮೆಯಾಗುತ ಬಂದು ಮೊರೆವಾಗ ಸ್ವಾಗತವ
ಅರಳಾಗಿ ಈವೆನಂತೆ !
ಸುಳಿಗಾಳಿಯಾಗಿ ಬಾ, ಕೊಳವಾಗಿ ನಕ್ಕೇನು,
ತಿಳಿದೀಗ ಹೋಹುದಲ್ತೆ ?"

ಸುಂದರವಾದ ಚಿತ್ರಗಳು ! ದುಂಬಿಯಾಗಿ ಬಂದಾಗ ಹೂಗಳಿಂದ ಸ್ವಾಗತ, ಗಾಳಿಯಾಗಿ ಬೀಸಿದಾಗ, ಕೊಳದ ನೀರು ಕದಲಿ ಅಲೆಯ ರೂಪದಲ್ಲಿ ನಗೆಯ ಕಾಣಿಕೆ !

'ಪುನರ್ಮಿಲನದ ನಂತರ' ಕವಿತೆಯಲ್ಲಿ ದುಷ್ಯಂತನ ವಿರಹದ ನಂತರ ಮತ್ತೆ ಅವನನ್ನು ಸೇರಿಕೊಂಡಾಗ ಶಕುಂತೆಲಯ ಭಾವಸ್ಥಿತಿಗಳು ಹೇಗಿದ್ದಿತೆಂಬುದರ ಕಲ್ಪನೆಯ ಚಿತ್ರ–ಹೀಗಿತ್ತು.

ಮಾತು ಮಿಂಚಾಗಿತ್ತು,
ಮೌನ ಮೊಳಗಾಗಿತ್ತು
ಸೂಸುವೊಲುಮೆಯಮೋಘ ವರ್ಷವಾಯ್ತು
ನಾಲ್ಕು ದಿನದಾ ಬಾಳು
ಸಮರಸದ ಹೊಂಬಾಳು
ಆತ್ಮಗಳ ಬಿತ್ತಿ ಬೆಳೆಕೊಂಡುದಾಯ್ತು !"

ನವೋದಯದ ಎಲ್ಲ ಅಂಶಗಳನ್ನು ಒಳಗೊಂಡ ಹಲವು ಕವಿತೆಗಳು ಇರುವುವಾದರೂ, ವ್ಯಕ್ತಿ ಚಿತ್ರಗೀತೆಗಳು ಮಳಗಿಯವರ ಅನನ್ಯವಾದ ಭಕ್ತಿ, ಶ್ರದ್ಧೆ, ಗೌರವಗಳನ್ನು ಆ ವ್ಯಕ್ತಿಗಳ ಬಗೆಗೆ ಇರುವ ಬಗೆಯನ್ನು ಅನ್ಯಾದೃಶವಾಗಿ ಕಟ್ಟಿಕೊಡುತ್ತವೆ. ಸ್ವಪ್ನ ತಂತ್ರದ ಮೂಲಕ ಭಾರತೀಯ ಕಣ್ಣೆದುರು ಕೃಷ್ಣ, ಪಾರ್ಥ, ಸಿದ್ಧಾರ್ಥ, ಅಶೋಕ, ರಾಮಕೃಷ್ಣಪರಮಹಂಸ, ವಿವೇಕಾನಂದ ಮುಂತಾದ ಮಹಾ ಮಹಾ ಚೇತನಗಳ, ಮಹಾಸಾಧನಗಳು–ಸುಳಿದಾಡುತ್ತಿರುವಂತೆಯೇ, ತನ್ನ ಮಡಿಲೊಳಗೆ, ಆಗಸದ ಚಂದ್ರನೇ ಶಿಶುರೂಪ ತಳೆದು ಬಂದು ಬಿದ್ದುದು, ಅನುಭವವಾಗಿ, ಥಟ್ಟನೆ ನಿದ್ದೆ ತಿಳಿದೆದ್ದು, ಕನಸು ಸ್ಮೃತಿಗೆ ತಂದುಕೊಂಡು ಆ ಶಿಶು ಯಾರೆಂದುಕೊಂಡಾಗ ಆತ ಜವಹರ ಚಿರಯುವಕ ಜವಹರ ! ಎಂಬ ವಾಸ್ತವಾದ ಅರಿವುಂಟಾಗುತ್ತದೆ. ಜವಹರಲಾಲರ ಬಗ್ಗೆ ಮಳಗಿಯವರಿದ್ದ ಉದಾತ್ತ ಭಾವನೆಯೇ ಕವಿತೆಯ ಹುಟ್ಟಿಗೆ ಕಾರಣವಾಗಿದೆ. ತೀನಂಶ್ರೀ, ಕನ್ನಡದ ವಚಶ್ರೀ !–ಎಂಬಲ್ಲಿ ತೀನಂಶ್ರೀ ಅವರ, ವ್ಯಕ್ತಿತ್ವ ಸಾಧನೆಗಳ ಸೂಕ್ಷ್ಮ ನಿರೂಪಣೆಯಿದೆ. ಅವರ ಕಾವ್ಯ ಶಾಸ್ತ್ರ ಪ್ರತಿಭೆ ಸಮಾಲೋಚನಾ ಸಾಮರ್ಥ್ಯ, ಸಮದರ್ಶದೊದವು ವಾಗ್‌ವಿಲಾಸಝುರಿ, ಪದಲಾಸ್ಯ, ತೂಕದ ನುಡಿ, ಜೋಕೆಯ ನಡೆ, ಸಮನ್ವಯದೊಲವು, ಮೃದು ಮಧುರ ಭಾವಗಳ, ಕನ್ನಡದ ಭಕ್ತಿ–ಇವೆಲ್ಲಕ್ಕೂ ಸಾಕಾರಮೂರ್ತಿಯಂತಿದ್ದವರ ಸಾವು ಕವಿ ಮನಸ್ಸನ್ನು ಕಲಕಿ, ತೀವ್ರ ದುಃಖಕ್ಕೆ

ಒಳಗಾಗಿಸಿದಾಗ, ಸಾವಿನ ಬಗ್ಗೆ ಸಿಟ್ಟಾಗುತ್ತಾರೆ. ಹಾಗೆಯೇ ತಮ್ಮನ್ನು ಸಂತವಿಸಿಕೊಳ್ಳಲು ಪ್ರಯತ್ನಿಸುತ್ತಾರೆ.

"ಮೃದು ಮಧುರ ಭಾವ ಅದೆ ಬೆಳೆದ ಜೀವ
ಸಾವಿಗಾಯ್ತೆ ಜೇನು ।
ಕಾಲನಿಗೆ ಕಾಲವೇನು ।" – ಎಂದು

ಬಹುಶಃ ಸಾವಿಗೂ ಅವರು ಪ್ರಿಯರಾದರೇನೋ ಎಂದೆಣಿಸುತ್ತಾರೆ.

ಮುಗಳಿಯವರ ೭೫ನೇ ಹುಟ್ಟುಹಬ್ಬಕ್ಕೆಂದು ಬರೆದ 'ರಸಿಕರಂಗರು' ಎಂಬ ಸುನೀತದಲ್ಲಿ ಮುಗುಳಿಯವರ ಸಮಗ್ರ ವ್ಯಕ್ತಿತ್ವವನ್ನು ಕೇವಲ ೧೪ ಸಾಲುಗಳಲ್ಲಿ ಅಡಕಗೊಳಿಸಿ ಅದ್ಭುತವಾಗಿ ಚಿತ್ರಿಸಿದ್ದಾರೆ. ಅವರನ್ನು

"ಮಾನದ ನಗೆ ಮುಗುಳು । ನಾಲಗೆಯ ಮೃತ ಸಾರಸ್ವ
ತದ ಸೊಲ್ಲನೆಲೆ ; ಹುಟ್ಟು ಸಜ್ಜನಿಕೆ ; ಬಾಳುರಿಗೆ
ಬೆಂದವರ, ಕಾಲ್ಯೋತು ನಿಂದವರ ಸಂತೈಸಿ
ಕೈಹಿಡಿವ ಕೆಳೆವಾತು ; ಹದದ ಬಾಳುವೆ...."

ಇತ್ಯಾದಿಯಾಗಿ ಅವರ ಪ್ರತಿಭೆ ಮಾನವೀಯತೆ, ಸ್ಪಂದನಶೀಲತೆಗಳನ್ನು ಬಣ್ಣಿಸಿ– ಇಂತಹ ಗುಣಗಳು ಯಾರಲ್ಲಿರಲು ಸಾಧ್ಯ ? ಎಂಬ ಪ್ರಶ್ನೆಯೆತ್ತಿ, ಅದಕ್ಕೆ ಉತ್ತರವಾಗಿ, ಅಂತಹ ಮಹೋದಯ ಬೇರಾರು ಅಲ್ಲ ; ಅವರೇ ರಸಿಕರಂಗರು ಕಣಾ ! ಸರಸತಿಗೆ ನೋಂತವರು" ಎಂದು ಅಚ್ಚರಿ ಭಾವದ ಪ್ರಶಂಸೆಯನ್ನು ಕಾಣಿಸುತ್ತಾರೆ. ಪ್ರತಿಯೊಂದು ಕವಿತೆಯೂ ಒಂದು ವಿಶಿಷ್ಟ ಗುಣದೊಂದಿಗೆ ಉಜ್ವಲವಾಗಿ ಕಾಣಿಸುತ್ತದೆ. ಇದೇ ಅಲ್ಲದೆ ಕನ್ನಡದ ಕಂಪನ್ನು ಚೆಲ್ಲುವ "ತಾಯೆ' ನಲ್ದಾಯೆ ! ನನ್ನ ಹಡೆದಮ್ಮ !" ಆತ್ಮೀಯ ಗೆಳೆಯ ಹೇಮಂತ ಕವನ ಎಚ್.ಬಿ. ಕುಲಕರ್ಣಿ ಅವರು ಅಕಾಲ ಮೃತ್ಯುವಿಗೆ ತುತ್ತಾದ ಸಂದರ್ಭದಲ್ಲಿ ಕವಿ ಮನಸ್ಸಿಗೆ ಆದ ಆಘಾತದ ಪರಿಯನ್ನು ವಿವರಿಸುವುದಾಗಿದೆ. ಹಾಗಾಗಿ ಕವಿತೆಗಳ ಅರ್ಥೈಸುವಿಕೆಯ ಸಾಧ್ಯತೆ ಅವರ ಕವಿತೆಗಳ ಹಿಂದಿನ ಸಂದರ್ಭದ ಅರಿವು ಅನಿವಾರ್ಯವಾಗುತ್ತದೆ. ಸಾಂದರ್ಭಿಕವಾಗಿ ಹೊರ ಪ್ರೇರಣೆಗಳಿಂದ ಸ್ಪಂದಿಸುವ ಕವಿ ಮನಸು ಯಾಕೋ ಏನೋ ಒಳಚಿಂತನೆಗಳನ್ನು ಹೊರಹಾಕುವ ಪ್ರಯತ್ನಕ್ಕೆ ಮುಂದಾಗಲಿಲ್ಲವೆಂಬುದು ಒಂದು ಅಚ್ಚರಿಯ ಸಂಗತಿಯೂ ಹೌದು, ವಿಷಾದದ ಸಂಗತಿಯೂ ಹೌದು, ಅವರಲ್ಲಿ ಅದ್ಭುತವಾದ ಕಾವ್ಯಪ್ರತಿಭೆಯಿದೆ; ಸೌಂದರ್ಯ ಗ್ರಹಿಕೆಯಿದೆ ; ಅನುಭಾವಿಕ ಆಲೋಚನೆಗಳಿವೆ. ಹೀಗಿದ್ದೂ ಕಾವ್ಯ ಕ್ಷೇತ್ರದಲ್ಲಿ ಮುಂದುವರೆಯದೆ ಶ್ರೀ ಅರವಿಂದರ ಮತ್ತು ಶ್ರೀಮಾತಾರ ತಾತ್ವಿಕ, ಅಧ್ಯಾತ್ಮಿಕ ಮತ್ತು ಪೂರ್ಣಯೋಗ ಸಂಬಂಧಿ ಚಿಂತನೆಗಳ ಗಾಢ ಪ್ರಭಾವಕ್ಕೆ ಒಳಗಾಗಿ, ಅವರನ್ನು ಅರ್ಥ ಮಾಡಿಕೊಳ್ಳುವ ಮತ್ತು ಜನಕ್ಕೆ ಅರ್ಥ ಮಾಡಿಸುವ ನಿಟ್ಟಿನಲ್ಲಿಯೇ ಮುಂದುವರೆದರು. ೧೯೩೦ರಿಂದ ೧೯೮೦–೯೦ರವರೆಗೆ ಕವಿತೆಗಳನ್ನು ರಚಿಸಿದರೂ,

ನವ್ಯ ಚಳುವಳಿಯ ಆಶಯುಗಳನ್ನು ಅರಿತಿದ್ದರೂ ನವೋದಯ ಮಾದರಿಗಳಿಗೇ ಅಂಟಿಕೊಂಡು ಭಾವ-ಅನುಭಾವ ಸ್ತರಗಳಲ್ಲಿಯೇ ಉಳಿದುಬಿಟ್ಟರು.

**ಅಮೃತ ಸಿಂಚನ :** ಈ ಕೃತಿ ಪ್ರೊ. ಮಳಗಿಯವರು, ಶ್ರೀ ಅರವಿಂದರು, ಮತಾರವಿಂದರ ಬಗ್ಗೆ ತಮಗಿದ್ದ ಶ್ರದ್ಧಾ, ಭಕ್ತಿ, ಅವರ ತಾತ್ವಿಕ ಚಿಂತನೆಗಳ ಬಗೆಗಿದ್ದ ನಂಬಿಕೆಗೆ ನಿದರ್ಶನವಾಗಿ ೨೦೧೦ರಲ್ಲಿ ತಮ್ಮ ಜನ್ಮಶತಾಬ್ಧಿಯ ಸಂದರ್ಭದಲ್ಲಿ ಹೊರತಂದ ಕೃತಿಯಾಗಿದೆ. ಅರವಿಂದರ ಪರಮ ಅನುಯಾಯಿಗಳಾಗಿದ್ದ ಬೇಂದ್ರೆಯವರ ಸಂಸರ್ಗದಿಂದ ಅರವಿಂದರ ಪರಿಚಯುವಾದಂದಿನಿಂದ ಸಂಪೂರ್ಣವಾಗಿ ಅವರ ಪ್ರಭಾವಕ್ಕೆ ಒಳಗಾಗಿ, ಅವರ ಮತ್ತು ಮಾತಾರವಿಂದರ ಚಿಂತನೆಗಳಿಗೆ, ತತ್ವಗಳಿಗೆ ಸಂಪೂರ್ಣವಾಗಿ ತಮ್ಮನ್ನು ತೆತ್ತುಕೊಂಡದ್ದೇ ಅಲ್ಲದೆ ಸುಮಾರು ೨೩ ವರ್ಷಗಳ ಕಾಲ (೧೯೭೩-೧೯೯೫) ಶ್ರೀ ಅರಬಿಂದೋ ಸೊಸೈಟಿಯ ಕನ್ನಡ ಅವತರಣಿಕೆ 'ಅಖಿಲ ಭಾರತ ಪತ್ರಿಕೆಯ' ಪ್ರಧಾನ ಸಂಪಾದಕರಾಗಿ, ಮಾತಾರವಿಂದರ ಹಲವು ಲೇಖನಗಳನ್ನು ಕನ್ನಡಕ್ಕೆ ಅನುವಾದಿಸಿದ್ದೇ ಅಲ್ಲದೆ ಅನೇಕ ಉಪನ್ಯಾಸಗಳನ್ನು ನೀಡುವುದರ ಮೂಲಕ ಮಾತಾರವಿಂದರ ತತ್ವಗಳನ್ನು ಕರಗತ ಮಾಡಿಕೊಂಡಿದ್ದಾರೆ. ಮಳಗಿಯವರ ನಿರಂತರ ಅಧ್ಯಯನ, ಚಿಂತನೆ, ಸಾಧನೆಗಳಿಂದಾಗಿ, ಕನ್ನಡದಲ್ಲಿ ಶ್ರೀ ಮಾತಾರವಿಂದರ ಚಿಂತನೆಗಳನ್ನು, ಸಮಗ್ರಯೋಗದ ಪರಿಚಯವನ್ನು ಈ ಕಿರುಹೊತ್ತಿಗೆಯಲ್ಲಿ ಜನಸಾಮಾನ್ಯರಿಗೆ ಅರ್ಥವಾಗುವಂತೆ ಸರಳ, ಸ್ಪಷ್ಟವಾದ ಶೈಲಿಯಲ್ಲಿ, ಮಾಡಿಕೊಡಲು ಪ್ರಯತ್ನಿಸಿದ್ದಾರೆ. ಮಾತಾರವಿಂದರು ಹೇಳುವ ಪ್ರತಿಯೊಂದು ವಿಚಾರವನ್ನು ತಮ್ಮ ಗ್ರಹಿಕೆಯ ಮೂಲಕ ವಿಶ್ಲೇಷಿಸಿ ವಿವರಿಸಿದ್ದಾರೆ. ಮುಖ್ಯವಾಗಿ ಶ್ರೀ ಮಾತಾರವಿಂದರು ಒಂದು ವಿಚಾರವನ್ನು ಹೇಳಿದ್ದರೆ, ಆ ಮಳಗಿಯವರು ಅದರ ಹಿನ್ನೆಲೆ, ಅದರ ಅರ್ಥವಿವರಣೆ-ಇತ್ಯಾದಿಯಾಗಿ ಬಿಡಿಸಿ ಬಿಡಿಸಿ ಸರಳವಾಗಿ ಕೇಳುಗರಿಗೆ, ಓದುಗರಿಗೆ ಮನದಟ್ಟು ಮಾಡಿಕೊಡುತ್ತಾರೆ. ಈ ಕೃತಿಯಲ್ಲಿ ಶ್ರೀಮಾತಾರವಿಂದರ, 'ಹೊಸ ಹುಟ್ಟು' ಭಗವಂತನು ನಿಮ್ಮ ಶ್ರೇಷ್ಠ ಗೆಳೆಯ, ಕೆಲವು ಸತ್ಯದ ಗುಟುಕುಗಳು, ಉಪನಿಷತ್ತಿನ ಎರಡು ಪಕ್ಷಿಗಳ ದೃಷ್ಟಾಂತ ಕಥೆ, ಜನಜಾಗೃತಿಗೆ ಶ್ರೀ ಅರವಿಂದರ ಕೊಡುಗೆ, ಜೀವನ ಸುಖ, ಜಾಗತಿಕ ಐಕ್ಯತೆ, ಭಗವಂತನ ಸಂಕಲ್ಪ, ಶ್ರೀ ಅರವಿಂದರ ಪೂರ್ಣಯೋಗದ ಕಿರುಪರಿಚಯ ಮತ್ತು ಕಡೆಯದಾಗಿ ತಮ್ಮ ಉಪನ್ಯಾಸದ ಲೇಖನ-ಎಲ್ಲಾ ಸೇರಿ ೧೦ ಲೇಖನಗಳಿವೆ ಈ ಕೃತಿಯಲ್ಲಿ.

ಮೊದಲ ಲೇಖನದಲ್ಲಿ, ಮಾತಾರವಿಂದರು ಹೇಳಿರುವ ಹೊಸ ಹುಟ್ಟನ್ನು, ಮಳಗಿಯವರು, ಆಧ್ಯಾತ್ಮಿಕ ಜೀವನವೇ ಹೊಸ ಹುಟ್ಟೆಂದು ಅರ್ಥೈಸುತ್ತಾರೆ. ನಮ್ಮೊಳಗಿನ ಅಂತಾರತ್ಮದ ಅರಿವೇ ಹೊಸ ಹುಟ್ಟು. ಈ ಹೊಸ ಹುಟ್ಟು ತಳೆದಾಗ ಅಂತರಾತ್ಮವು ನಮ್ಮನ್ನು ಪ್ರಭುವಿನಂತೆ ಆಳುತ್ತಿರುತ್ತದೆ ಎಂದು ನಂಬುತ್ತಾರೆ. ಆತ್ಮವನ್ನು ವಿಶ್ವವ್ಯಾಪಿ ವಾತಾವರಣವೆಂದು ಗುರುತಿಸುತ್ತಾರೆ. ಅವರ ಗ್ರಹಿಕೆಯಲ್ಲಿ ಆತ್ಮವಿಶ್ವವ್ಯಾಪಿಯೂ ಹೌದು, ವಿಶ್ವಾತೀತವೂ ಹೌದು. ಆತ್ಮದ ಈ ವಾತಾವರಣದ ಒಂದಂಶವೇ ನಮ್ಮೊಳಗಿನ 'ಅಂತರಾತ್ಮ'. ಆತ್ಮದ ವಾತಾವರಣವನ್ನು ಉಸಿರಾಡಿಸುತ್ತಾ ಬಾಳುವವನಿಗೆ ಈ ಜೀವನ ಸಾಗರದ

ಮತ್ತೊಂದು ದಡಕ್ಕೆ ಬಂದು ಹತ್ತಿದ ಅನುಭವವಾಗಿರುತ್ತದೆ ! ಹೊಸ ಹುಟ್ಟಿನ ಈ ಅನುಭವ ಬರಬರುತ್ತ ಗಟ್ಟಿಗೊಳ್ಳುತ್ತದೆ. ಆಗ ಆತ್ಮದ ಸ್ಪರ್ಶದಿಂದ ದಿವ್ಯಾನಂದವಾಗುತ್ತದೆ. ಹೊರಗಿನ ವಿಕೃತ ಶಕ್ತಿಗಳಿಗೆ ಕಿವಿಗೊಡದೆ ಅಂತರಾತ್ಮದ ದನಿಗೆ ಕಿವಿಗೊಟ್ಟಾಗಲೇ ಹೊಸ ಹುಟ್ಟು ಪಡೆಯಲು ಸಾಧ್ಯ–ಎಂಬುದು ಮಳಗಿಯವರ ಅಭಿಪ್ರಾಯ.

ಎರಡನೆಯ ಲೇಖನದಲ್ಲಿ ಭಗವಂತನನ್ನು ಶ್ರೇಷ್ಠ ಗೆಳೆಯನೆಂದು ನಿರೂಪಿಸುವ ಪ್ರಯತ್ನವಿದೆ. ಭಗವಂತನು ಶ್ರೇಷ್ಠ ಗೆಳೆಯನೆಂದು ನಂಬಿ ನಡೆದಾಗ ನಮಗೆ ಯಾವುದೇ ಮುಜುಗರಗಳಿಲ್ಲದೆ ನಮ್ಮೆಲ್ಲ ಅಂತರಂಗವನ್ನು ಅವನ ಮುಂದೆ ತೆರೆದಿರಿಸಿಕೊಳ್ಳಬಹುದು. ಎಲ್ಲೆಲ್ಲೂ ಭಗವಂತನಿದ್ದು ಸರ್ವವ್ಯಾಪಿ ಎನಿಸಿಕೊಂಡಿದ್ದಾನೆ. ನಿಜವಾದ ಗೆಳೆಯನಾದ್ದರಿಂದ ಅವನಲ್ಲಿ ನಮ್ಮ ತಪ್ಪುಗಳನ್ನು ಕ್ಷಮಿಸುವ ಗುಣವಿದೆಯಲ್ಲದೆ, ನಮ್ಮ ಅಗತ್ಯದ ಸಂದರ್ಭಗಳಲ್ಲಿ ದಯೆ, ಕರುಣೆ, ಅನುಕಂಪ, ಸಹಾನುಭೂತಿಗಳನ್ನು ಹೊಮ್ಮಿಸುತ್ತಾನೆ ; ಮನಸ್ಸನ್ನು ಪರಿಶುದ್ಧಗೊಳಿಸುತ್ತಾನೆ. ಸಿದ್ಧಿಯ ರಾಜಮಾರ್ಗ ತೋರುತ್ತಾನೆ. ದೈಹಿಕ ಮಾನಸಿಕ ಸಮಸ್ಯೆಗಳನ್ನೆಲ್ಲ ನಿವಾರಿಸುತ್ತಾನೆ. ಬಾಳದಾರಿಯಲ್ಲಿ ಸರಿಯಾದ ಮಾರ್ಗದರ್ಶನ ಮಾಡಿಸುತ್ತಾನೆ. ಆದ್ದರಿಂದ ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ, ನಮ್ಮೆಲ್ಲ ಅಗತ್ಯಗಳಿಗೆ ನೆರವಾಗಿ ನಿಲ್ಲುವವನಾದ್ದರಿಂದ ಅವನೇ ನಿಜವಾದ ಗೆಳೆಯ ಎಂಬುದನ್ನು ದೃಷ್ಟಾಂತಗಳೊಂದಿಗೆ ಸಾದರಪಡಿಸುತ್ತಾರೆ.

'ಕೆಲವು ಸತ್ಯದ ಗುಟುಕುಗಳು' ಲೇಖನದಲ್ಲಿ ಮುಖ್ಯವಾಗಿ ಮಕ್ಕಳಿಗೆ ಕಲಿಸಿಕೊಡಬೇಕಾದ ಜೀವನ ಪಾಠಗಳಿವೆ. ಅವುಗಳೆಂದರೆ – ಪರಿಣಾಮಗಳೇನೇ ಆಗುತ್ತಿದ್ದರೂ ಸುಳ್ಳು ಹೇಳಬಾರದು : ಸಿಟ್ಟು ಸೆಡವ, ಕೆರಳಿಕೆ ಚೀರಾಟ ರೇಗಾಟ ಮುಂತಾಗಿ ಮನಸ್ಸಿಗೆ ನೋವುಂಟು ಮಾಡುವುದನ್ನು ಹತೋಟಿಯಲ್ಲಿರಿಸಿಕೊಳ್ಳಬೇಕು. ದೇವರ ಬಗ್ಗೆ ಸಂಪೂರ್ಣ ಭಕ್ತಿ ಭಾವವನ್ನು ಇರಿಸಿಕೊಳ್ಳಬೇಕು, ತನ್ನ ತಾನರಿತುಕೊಂಡು ತನ್ನ ಮನದ ಮೇಲೆ ನಿಯಂತ್ರಣವಿರಿಸಿಕೊಳ್ಳಬೇಕು ಇತ್ಯಾದಿ ಇತ್ಯಾದಿ ಪಾಠಗಳ ಮೂಲಕ ಸನ್ಮಾರ್ಗದಲ್ಲಿ ನಡೆಯುವಂತಾಗುವುದು. ಇವುಗಳ ಜೊತೆಗೆ, ತಾನು ಮಾಡುತ್ತಿರುವ ಕೆಲಸಗಳೇನು ? ಅವುಗಳ ಉದ್ದೇಶಗಳೇನು ? ತಾನೇಕೆ ಹೀಗೆ ಮಾಡುತ್ತಿದ್ದೇನೆ ? ತನ್ನೊಳಗೆ ಹೀಗೇಕೆ ಆಗುತ್ತಿದೆ ? – ಇತ್ಯಾದಿಗಳ ಬಗ್ಗೆ ಚಿಂತಿಸಿ, ವಿವೇಕಯುತವಾದ ನಿರ್ಧಾರವನ್ನು ಕೈಗೊಳ್ಳಲು ಸಾಧ್ಯವಾಗುತ್ತದೆಂಬ ಅರಿವನ್ನು ಎಳೆಯ ವಯಸ್ಸಿನಿಂದಲೇ ಅವರಲ್ಲಿ ಉಂಟು ಮಾಡುವುದೇ ಈ ಲೇಖನದ ಆಶಯ.

ಉಪನಿಷತ್ತಿನ ಎರಡು ಪಕ್ಷಿಗಳ ದೃಷ್ಟಾಂತ ಲೇಖನದಲ್ಲಿ ಪಕ್ಷಿಗಳ ರೂಪಕಗಳ ಮೂಲಕ ಮೋಹ ಮಾಯೆಗಳ ಸ್ವರೂಪವನ್ನು ವಿವರಿಸಲಾಗಿದೆ. ಸಿಹಿ ಹಣ್ಣುಗಳನ್ನು ತಿನ್ನುವಾಗ ಒಂದು ಪಕ್ಷಿಗೆ, ತನ್ನ ಪಕ್ಕದಲ್ಲಿನ ಪಕ್ಷಿಯ ನೆನಪಾಗುವುದೇ ಇಲ್ಲ, ಅದೇ ಕಹಿ ಹಣ್ಣು ತಿನ್ನುತ್ತಿದ್ದಂತೆಯೇ ಬೆಚ್ಚಿ, ಗಮನವನ್ನು ಪಕ್ಕದ ಪಕ್ಷಿಯತ್ತ ಹರಿಸುತ್ತದೆ.

ಈ ಕಥೆ ವಾಸ್ತವದಲ್ಲಿ ವೈಯಕ್ತಿಕ ಆತ್ಮೋದ್ಧಾರದ ಬೋಧೆಗೆ ಸಂಬಂಧಿಸಿದ್ದು ಸಾಂಸಾರಿಕ ಜೀವಿಗಳು ಇಹಜೀವನದ ಸುಖ–ಭೋಗದಲ್ಲಿ ಮುಳುಗಿರುವಾಗ,

ಮೇಲಿರುವ ಪರಮಾತ್ಮನು ತಮ್ಮೊಳಗಿನ ಜೀವಾತ್ಮದ ಅತ್ಯುಚ್ಚ ಸ್ವರೂಪವೆಂಬುದನ್ನೇ ಮರೆತು ಬಿಟ್ಟಿರುತ್ತಾರೆ. ಈ ಜಗದ ಮೋಹ-ಮಾಯೆಗಳೇ ಇದಕ್ಕೆ ಕಾರಣ. ಆದರೆ ಮೋಹ-ಮಾಯೆಗಳ ಜಾಲದಿಂದ ಬಿಡಿಸಿಕೊಳ್ಳುವ ಕಾಲ ಬಂದೇ ಬರುತ್ತದೆ. ಕಷ್ಟ-ಸಂಕಷ್ಟಗಳ ಅನುಭವವೇ ಪರಮಾತ್ಮನೆಡೆಗೆ ಮುಖ ಮಾಡುವಂತೆ ಮಾಡುತ್ತದೆ. ಇಂದು ಪಾಶ್ಚಿಮಾತ್ಯ ಪ್ರಭಾವದಿಂದ ನಮ್ಮ ಮನಸ್ಸು ದಾರಿ ತಪ್ಪಿದೆ. ಈ ವಿದೇಶಿ ಪದ್ಧತಿ ಶಿಕ್ಷಣಕ್ಕೆ ಸಂಬಂಧಿಸಿದಂತೆ, ಮನ ಬುದ್ಧಿಗಳನ್ನು ಬಂಧಿಸಿದೆ. ಇಂತಹ ಸಂದರ್ಭದಲ್ಲಿ ನಮ್ಮನ್ನು ನಾವೇ ಶೋಧ ಮಾಡಿಕೊಂಡು ನಮ್ಮೊಳಗಿನ ಸ್ವರಾಜ್ಯ, ಸ್ವಾತಂತ್ರ್ಯಗಳನ್ನು ಕಂಡುಕೊಳ್ಳಬೇಕಿದೆ ಎಂಬುದು ಮಳಗಿಯವರ ಆಶಯ.

'ಜನಜಾಗೃತಿಗೆ ಅರವಿಂದರ ಕೊಡುಗೆ' ಲೇಖನದಲ್ಲಿ, ಅರವಿಂದರು ಜನಜಾಗೃತಿಗಾಗಿ ಕೈಕೊಂಡ ಕಾರ್ಯ ಚಟುವಟಿಕೆಗಳನ್ನು ವಿವರಿಸಿದ್ದಾರೆ. ಇವರು ಕಂಡುಕೊಂಡಂತೆ ಅರವಿಂದರು ತಾವೇ ತಮ್ಮ ಅಧ್ಯಾತ್ಮಿಕ ಬದುಕಿನ ಶೈಲಿಯಿಂದಾಗಿ ಮಾನವ ಸಮುದಾಯಕ್ಕೆ ಅಂತಃಸ್ಫೂರ್ತಿಯಾಗಿರುವುದರ ಜೊತೆಗೆ, ಎರಡು ಬಗೆಯ ಜನಜಾಗೃತಿಗಳನ್ನು ಕೈಗೆತ್ತಿಕೊಂಡದ್ದನ್ನು ಪ್ರಸ್ತಾಪಿಸುತ್ತಾರೆ. ಅವೆಂದರೆ ಅಂತರಂಗ ಜಾಗೃತಿ, ಬಹಿರಂಗ ಜಾಗೃತಿ, ನಮ್ಮ ರಾಷ್ಟ್ರದ ಸ್ವಾತಂತ್ರ್ಯ ಯುದ್ಧದ ರಾಜಕೀಯ ರಂಗದ್ದಾದರೆ, ಅಂತರಂಗ ಜಾಗೃತಿ ಆಧ್ಯಾತ್ಮಿಕ ರಂಗದ್ದು. ವಿಶಿಷ್ಟವೂ ವಿಚಿತ್ರವೂ ಎಂಬಂತೆ ಅರವಿಂದರ ಶಿಕ್ಷಣವೆಲ್ಲವೂ ನಡೆದದ್ದು ಇಂಗ್ಲೆಂಡಿನಲ್ಲಿ. ಪಾಶ್ಚಿಮಾತ್ಯ ಸಂಸ್ಕೃತಿ ಸಾಮಾಜಿಕ ಪರಿಸರ ! ಅದೆ ಸ್ವದೇಶಕ್ಕೆ ಮರಳಿದಾಗ, ಈ ದೇಶದ ಮಣ್ಣಿನ ಸ್ಪರ್ಶವಾಗುತ್ತಿದ್ದಂತೆ ಅರವಿಂದರಿಗೆ ಒಂದು ರೀತಿಯ ಅನಿರ್ವಚನೀಯ ಅನುಭವ ವಾಯಿತಂತೆ. ಬಡೋದೆಯ ಮಹಾರಾಜರ ಅಪೇಕ್ಷೆಯಂತೆ ಮತ್ತು ಎಲ್ಲ ಸಾಮಾನ್ಯರಂತೆ ಅವರೂ ಸರ್ಕಾರಿ ನೌಕರಿಯಲ್ಲಿ ಸೇವೆ ಸಲ್ಲಿಸುತ್ತಲೇ ಸಾಹಿತ್ಯ ರಚನೆ, ಯೋಗಾಭ್ಯಾಸ, ದೇಶಸೇವೆ ಮೊದಲಾದವುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ವಿದ್ಯಾರ್ಥಿಗಳನ್ನೂ ರಾಷ್ಟ್ರೀಯ ಚಳುವಳಿಗೆ ಅಣಿಯಾಗಿಸುತ್ತಿದ್ದರಂತೆ. ಪಾಠ ಪ್ರವಚನಗಳು, ಪತ್ರಿಕೋದ್ಯಮದಲ್ಲಿದ್ದು ಉಗ್ರಟೀಕೆಗಳನ್ನು ಒಳಗೊಂಡ ರಾಜಕೀಯ ಲೇಖನಗಳ ಬರಹ, ಕ್ರಾಂತಿಕಾರಿ ತರುಣರ ಗುಪ್ತ ಸಂಘಟನೆಗಳ ವ್ಯವಸ್ಥೆ-ದೇಶಾಭಿಮಾನ ಪ್ರಚೋದಕ, ಬ್ರಿಟಿಷ್ ಸಾಮ್ರಾಜ್ಯ ಸತ್ತೆಯ ಬಗ್ಗೆ ಉಗ್ರ ಪ್ರತಿಭಟನೆ ಇತ್ಯಾದಿಗಳನ್ನು ವಿವರಿಸುವ 'ಭವಾನಿ ಮಂದಿರ್ ಪುಸ್ತಕದ ರಚನೆ ಕ್ರಾಂತಿಕಾರಿಗಳ ಕೈಐಪಿಡಿ, ಭಗವದ್ಗೀತೆಯಂತಿದ್ದ ಈ ಪುಟ್ಟ ಕೃತಿಯಿಂದ ಅಸಂಖ್ಯ ಬಂಗಾಲಿ ಯುವಕರನ್ನು ರಾಷ್ಟ್ರದ ಸ್ವಾತಂತ್ರ್ಯ ಯಜ್ಞದಲ್ಲಿ ಬಲಿಯಾಗಲು ಅಣಿಗೊಳಿಸಿದರು.

ಸಮಾಂತರದಲ್ಲಿಯೇ ಸ್ವಾತಂತ್ರ್ಯ ಸಿದ್ಧಿಗಾಗಿ ಆಧ್ಯಾತ್ಮ ಚಿಂತನೆ ಯೋಗ ಸಾಧನೆಗಳಲ್ಲಿ ನಿರತರಾದರು. ವಿವೇಕಾನಂದರ ಮಾನಸಪುತ್ರಿ ಎನಿಸಿದ್ದ ಉಗ್ರಕ್ರಾಂತಿಕಾರಿಣಿ ಸಿಸ್ಟರ್ ನಿವೇದಿತಾರನ್ನು ತಮ್ಮ ಆಂದೋಲನಕ್ಕೆ ಸೆಳೆದುಕೊಂಡರು. ಆ ಕಾಲಘಟ್ಟದಲ್ಲಿ ನಡೆಯುತ್ತಿದ್ದ ಪ್ರತಿಯೊಂದು ರಾಜಕೀಯ ಘಟನೆ, ಸಂದರ್ಭಗಳಲ್ಲಿ ಪಾಲುಗೊಳ್ಳುತ್ತಲೇ, ದೇಶದ್ರೋಹಿ ಆರೋಪಗಳನ್ನು ಎದುರಿಸುತ್ತಲೇ, ರಾಷ್ಟ್ರನಾಯಕರೆಂದು ಕರೆಸಿಕೊಳ್ಳುವ ಮಟ್ಟಕ್ಕೆ

ಬೆಳೆದರು. ಅನೇಕ ಮಂದಿಯ ತ್ಯಾಗ ಬಲಿದಾನಗಳಿಂದ ಭಾರತಕ್ಕೆ ಬಿಡುಗಡೆಯೂ ಆಯಿತು. ನಂತರ ಅರವಿಂದರು, ಅಂತರಾತ್ಮದ ಆದೇಶದಂತೆ ಫ್ರೆಂಚ್ ಆಡಳಿತದ ಚಂದ್ರನಗರಕ್ಕೆ, ಅನಂತರ ಪಾಂಡಿಚೇರಿಗೆ ತಮ್ಮ ಕೆಲವು ಆತ್ಮೀಯ ಶಿಷ್ಯರೊಂದಿಗೆ ಹೋಗಿ ಯೋಗ ಸಾಧನೆಯಲ್ಲಿ ನೆಲೆಗೊಂಡದ್ದನ್ನು ಮಳಗಿಯವರು ಅರವಿಂದರ ಬಹಿರಂಗ ಜನಜಾಗೃತಿಯ ಘಟ್ಟವೆಂದು ಗುರುತಿಸುತ್ತಾರೆ.

ಮುಂದೆ ಅವರು ಸಂಪೂರ್ಣವಾಗಿ ಆಧ್ಯಾತ್ಮಿಕ ಸಾಧನೆ, ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಾರೆ. ಪಾಲ್ ರಿಚರ್ಡ್ ಸೂಚನೆ ಮೇರೆಗೆ ಆಧ್ಯಾತ್ಮಿಕ ವಿಚಾರಗಳನ್ನು ಪ್ರಚುರಪಡಿಸಲು 'ಆರ್ಯ' ಪತ್ರಕೆಯನ್ನು ಆರಂಭಿಸಲಾಗುತ್ತದೆ. ಈ ಪತ್ರಿಕೆ ಅರವಿಂದರ ಆಧ್ಯಾತ್ಮಿಕ ವಿಚಾರಗಳ ಅಭಿವ್ಯಕ್ತಿಗೆ ಒಂದು ಸಮರ್ಥ ಮಾಧ್ಯಮವಾಗಿ ಪರಿಣಮಿಸುತ್ತದೆ. ಈ ಪತ್ರಿಕೆಯಲ್ಲಿಯೇ ಅರವಿಂದರ ಗೀತಾ ಪ್ರಬಂಧಗಳು ; ದಿವ್ಯ ಜೀವನ ; ಯೋಗ ಸಮನ್ವಯ; ವೇದ ರಹಸ್ಯ ; ಉಪನಿಷತ್ತುಗಳು ಭಾರತ ; ಸಂಸ್ಕೃತಿಯ ಮೂಲ ತತ್ವಗಳು–ಮುಂತಾದ ಬೃಹದ್ಗ್ರಂಥಗಳು ಧಾರಾವಾಹಿಯಾಗಿ ಪ್ರಕಟವಾದವು. ಇವೆಲ್ಲವುಗಳ ಕಿರೀಟ ಪ್ರಾಯವೆಂಬಂತೆ, 'ಸಾವಿತ್ರಿ' ಮಹಾಕಾವ್ಯ, 'ಸಮಗ್ರ ಯೋಗ'–ಮೊದಲಾಗಿ ಅವರು ತಮ್ಮ ಜೀವನದ ಉದ್ದಕ್ಕೂ ನಿರಂತರವಾಗಿ ಚಿಂತನಶೀಲ, ಸೃಜನಶೀಲ ಕೃತಿರಚನೆಯನ್ನು ಮುಂದುವರೆಸಿಕೊಂಡು ಹೋದರು. ಮದರ್ ಶ್ರೀಮಾತೆಯಾಗಿ ಗುರುತಿಸಿಕೊಂಡ ಶ್ರೀಮತಿ ರಿಚರ್ಡ್ ಅವರೂ ಅರವಿಂದಾಶ್ರಮ ಕಟ್ಟಿ ಅಲ್ಲಿಯೇ ಉಳಿದುಕೊಂಡರು. ಅಸಂಖ್ಯಾತ ಆಧ್ಯಾತ್ಮ ದಾಹಿಗಳು ಅರವಿಂದರ ತತ್ವಾದರ್ಶಗಳಿಗೆ ಆಕರ್ಷಿತರಾಗಿ ಅವರಲ್ಲಿಗೆ ಬರುವಂತಾದುದು, ಅರವಿಂದರ ಎರಡನೆಯ ಚಟುವಟಿಕೆಯಾದ ಅಂತರಂಗ ಜನಜಾಗೃತಿ –ಹೀಗೆ ಅರವಿಂದರ ಬದುಕಿನ ಸೂಕ್ಷ್ಮ ಅಧ್ಯಯನದ ಮೂಲಕವೇ ಅವರು ಮಾಡಿದ ಕೆಲಸಗಳನ್ನು ಬಹಿರಂಗ ಜನಜಾಗೃತಿ ಅಂತರಂಗ ಜನಜಾಗೃತಿ ಎಂದು ಮಳಗಿಯವರು ಗುರುತಿಸುತ್ತಾರೆ.

'ಜೀವನ ಸುಖ' ಕುರಿತ ಲೇಖನದಲ್ಲಿ ಶ್ರೀ ಅರವಿಂದರು ಮತ್ತು ಶ್ರೀಮಾತಾ ಅವರು 'ಸುಖ' ಪರಿಕಲ್ಪನೆಯ ಬಗ್ಗೆ ಏನನ್ನು ಹೇಳುತ್ತಾರೆ ಎನ್ನುವುದನ್ನು ಚರ್ಚಿಸುತ್ತಾರೆ. 'ಸುಖ'ದ ಬಯಕೆ ಎಲ್ಲರಿಗೂ ಇರುವುದು ಸಹಜವೇ ಆದರೂ, ಪ್ರಾಪಂಚಿಕ ಸುಖ, ಆಧ್ಯಾತ್ಮಿಕ ಅಂದರೆ ಆತ್ಮಮೂಲದಿಂದ, ಅಂತರಾತ್ಮದಿಂದ ಹೊಮ್ಮುವ ಸುಖ, ಇವೆರಡರಲ್ಲಿ ಯಾವುದು ಮುಖ್ಯವಾಗಬಹುದು ಎನ್ನುವ ಪ್ರಶ್ನೆಗೆ ಉತ್ತರವಾಗಿ, ಆತ್ಮಸುಖವನ್ನೇ ನಿಜವಾದ ಸುಖವೆಂದು ಪರಿಗಣಿಸುತ್ತಾರೆ. ಸಾಮಾನ್ಯ ಲೌಕಿಕ ಸುಖದ ಉಗಮ ಮಾನವನ ಪ್ರಾಣಮಯ ಕೋಶದಲ್ಲಿ ಮತ್ತು ಮನೋಮಯ ಕೋಶದಲ್ಲಿ, ಆದ್ದರಿಂದ ಇದಕ್ಕೆ ಶುದ್ಧತೆಯಾಗಲಿ, ಚಿರಂತನತೆಯಾಗಲಿ ಇರುವುದಿಲ್ಲ. ಆತ್ಮಸುಖ 'ಪ್ರಶಾಂತ: ಸದಾ ನಗು ನಗುತ್ತಿರುವುದು ಅದರ ಗುಣಧರ್ಮ. ಅದರ ಸ್ಥಾನ ಮಾನವ ಹೃದಯ. ಹೃದಯದಲ್ಲಿಯೇ ಭಗವಂತನ ವಾಸ. ಹೃದಯ ಸುಖಕ್ಕೆ ಯಾವುದೇ ಪೀಡೆ ಇಲ್ಲ. ಇದೇ ನಿಜವಾದ ಸುಖ. ಈ ಸುಖಕ್ಕೆ ಭಗವಂತನ ಅನುಗ್ರಹದ ಅಗತ್ಯವಿದೆ. ಮನದಲ್ಲಿ ಸುಳಿವ ಆಲೋಚನೆ ಹಂಬಲಗಳಲ್ಲಿ ಕಾಣಿಸಿಕೊಳ್ಳಬಹುದಾದ ನಿರಾಶೆಯನ್ನು ಹತ್ತಿಕ್ಕಿ

ಆತ್ಮಾನಂದದ ಆಶಾವಾದಿಯಾಗಿರುವುದೇ ಪರಮ ಸುಖ"–ಎಂಬ ಅರವಿಂದರ ಆಲೋಚನೆಯನ್ನು ಸರಳವಾಗಿ ನಿರೂಪಿಸಿದ್ದಾರೆ. ಅನೇಕ ಉದಾಹರಣೆಗಳ ಮೂಲಕ ಅರವಿಂದರ ಚಿಂತನೆಗಳ ಮಹತ್ವವನ್ನು ಎತ್ತಿ ಹಿಡಿಯುತ್ತಾರೆ. ಕಡೆಯಲ್ಲಿ ಅರವಿಂದರ ಮಾತನ್ನು ಉದಾಹರಿಸುತ್ತಾರೆ. "ಈ ಸೃಷ್ಟಿ ಪರಮಾತ್ಮನ ಲೀಲೆ. ಅಂತೆಯೇ ಅದು ಆನಂದಮಯ ಸೃಷ್ಟಿ" ಜೊತೆಗೆ ತಮ್ಮ ಸಂದೇಶವನ್ನೂ ಹೀಗೆ ಹೇಳುತ್ತಾರೆ. "ಪ್ರತಿಯೊಬ್ಬ ಮಾನವನೂ ಪರಮಾತ್ಮನೊಂದಿಗೆ ಸದಾ ನಕ್ಕು ನಲಿದಾಡುವುದನ್ನು ಕಲಿತುಕೊಳ್ಳಬೇಕು. ಆತನೊಂದಿಗೆ ಆಟವಾಡುತಿರುವುದೇ ನೈಜ ಜೀವನ. ಅದೇ ಪರಮ ಸುಖ" – ಎಂದು ಮುಗಿಸುತ್ತಾರೆ.

ಮತ್ತೊಂದು 'ಜಾಗತಿಕ ಐಕ್ಯತೆ' ಎಬ ಲೇಖನ ಜಗತ್ತೇ ಐಕ್ಯತೆಯನ್ನು ಬಯಸುತ್ತದೆ. ಎಲ್ಲರೂ ಅದಕ್ಕಾಗಿ ಹಾತೊರೆಯುತ್ತಾರೆ. 'ಸರ್ವೇ ಜನಾಃ ಸುಖಿನೋ ಭವಂತು' ಎಂಬ ಘೋಷಣೆ ವೈದಿಕ ಸಂಸ್ಕೃತಿಯಿಂದ ಬಂದದ್ದು. ಈ 'ಐಕ್ಯತೆ' ಪರಿಕಲ್ಪನೆಯ ಉಗಮದ ಇತಿಹಾಸವನ್ನು ಸೂಕ್ಷ್ಮವಾಗಿ ಈ ಲೇಖನದಲ್ಲಿ ಪ್ರಸ್ತಾಪಿಸುತ್ತಾರೆ. ಅರವಿಂದರೆ ಈ ವಿಷಯದ ಬಗ್ಗೆ ಸುದೀರ್ಘವಾದ ಚಿಂತೆ ನಡೆಸಿದ್ದನ್ನು ದಾಖಲಿಸಿದ್ದಾರೆ. ಇದೇ ಸಂದರ್ಭದಲ್ಲಿ ಫ್ರೆಂಚ್ ಕ್ರಾಂತಿ, ರಷ್ಯಾ ಕ್ರಾಂತಿಗಳ ಬಗ್ಗೆ ಪ್ರಸ್ತಾಪಿಸಿ, ಮಾನವ ಸಮಾಜ, ಸ್ವಾತಂತ್ರ್ಯ, ಸಮತಾಭಾವ, ಭ್ರಾತೃತ್ವ ಇತ್ಯಾದಿ ಪರಸ್ಪರ ಪೂರಕ ತತ್ವಗಳ ಬುನಾದಿಯ ಮೇಲೆ ನಿರ್ಮಾಣವಾಗಬೇಕೆಂಬ ಅಭಿಪ್ರಾಯ ಪ್ರಚುರವಾಯಿತಾದರೂ, ಎರಡು ಜಾಗತಿಕ ತಳಹದಿಯ ಮೇಲೂ ಐಕ್ಯತೆ ಸಾಧ್ಯವಾಗಲಿಲ್ಲ. ಅರವಿಂದರ ಐಕ್ಯತೆಯ ಕನಸು ನಿಜವಾಗಲೇ ಇಲ್ಲ ಎಂದು ಹೇಳುತ್ತಾ ಹಾಗಾಗಲು ಕಾರಣಗಳು ಏನಿರಬಹುದೆಂಬುದರ ವಿವರಗಳನ್ನು ವಿಸ್ತರಿಸಿ ಹೇಳುತ್ತಾ ಅರವಿಂದರ ಐಕ್ಯತೆಯ ನಿರೀಕ್ಷೆ ಸಫಲವಾಗಲಿಲ್ಲವೆಂದು ಸಮರ್ಥಿಸುತ್ತಾರೆ. ಅವರ ಮಾತುಗಳಲ್ಲೇ ಹೇಳುವುದಾದರೆ, "ಸ್ವಾತಂತ್ರ್ಯ, ಸಮತಾಭಾವ ಹಾಗೂ ಭ್ರಾತೃತ್ವ–ಈ ಮೂರರಲ್ಲಿ ಯಾವೊಂದು ಧ್ಯೇಯವೂ ಮನುಷ್ಯನ ಕೈಗೆ ಎಟುಕಿಲ್ಲ ಎಂಬುದು ಶ್ರೀ ಅರವಿಂದರ ಖಚಿತ ವಿಚಾರ. ಸ್ವಾತಂತ್ರ್ಯ ಹಾಗೂ ಸಮತಾಭಾವಗಳು ಬಾಹ್ಯದಲ್ಲಿ ತೋರುವ ಯಾಂತ್ರಿಕ ಹಾಗೂ ಸುಳ್ಳಿನ ಸ್ವಾತಂತ್ರ್ಯ–ಸಮತಾ ಭಾವಗಳಾಗಿವೆ. ಭ್ರಾತೃತ್ವವಂತೂ ವ್ಯಾವಹಾರಿಕ ತತ್ವವೇ ಅಲ್ಲವೆಂದು ಹೀಗಳೆಯಲ್ಪಟ್ಟಿದೆ. ಭ್ರಾತೃತ್ವಕ್ಕೆ ಬದಲಾಗಿ ಸಮಾನ ಪಾಲುಗಾರಿಕೆಯ ತತ್ವವೊಂದನ್ನು ಸೂಚಿಸಲಾಗಿದೆ. ಇದು ತೋರಿಕೆಯ ಹಾಗೂ ಯಾಂತ್ರಿಕ ರೀತಿಯದೇ ಎಂದು ಶ್ರೀ ಅರವಿಂದರ ಸುಸ್ಪಷ್ಟವಾಣಿ".– ಹೀಗೆ ಅರವಿಂದರ ತತ್ವ ವಿಚಾರಗಳನ್ನೇ ಎತ್ತಿಹಿಡಿಯುತ್ತಾರೆ. ಅರವಿಂದರು ನಿರೀಕ್ಷಿಸುವ ಯಾವ ಮೌಲ್ಯಗಳೂ "ಮಾನವನ ಆಂತರಂಗಿಕ ಸ್ವಭಾವ ಮತ್ತು ಅದಕ್ಕನುಗುಣವಾದ ಬಾಹ್ಯ ಜೀವನ ರೀತಿಯ ಪರಿವರ್ತನೆ" ಆಗದ ಹೊರತು, ಅನುಷ್ಠಾನಗೊಳ್ಳುವುದಿಲ್ಲ. ಭ್ರಾತೃತ್ವ, ಸಮತೆ, ಸ್ವಾತಂತ್ರ್ಯ–ಇವೆಲ್ಲವೂ ಆತ್ಮಗುಣಗಳಾದ್ದರಿಂದ ಧರ್ಮದ ಇಂಗಿತದಂತೆ ಆತ್ಮಶಕ್ತಿಯನ್ನು ರೂಢಿಸಿಕೊಳ್ಳುವುದರ ಮೂಲಕ, ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವಾಗುತ್ತದೆ ಎನ್ನುವ ಅರವಿಂದರ ವಿಚಾರಧಾರೆಯನ್ನು ಸ್ಪಷ್ಟಪಡಿಸುತ್ತಾರೆ.

'ಭಗವಂತನ ಸಂಕಲ್ಪ'ದ ಬಗ್ಗೆ ಅರವಿಂದರು ಹೇಳುವ ಮಾತುಗಳನ್ನು ಉದ್ಧರಿಸುತ್ತಾ ಅದಕ್ಕೆ ಪೂರಕವಾಗುವಂತಹ ವಿಚಾರಗಳನ್ನು ಜೋಡಿಸುತ್ತಾ, ಅರವಿಂದರ ತತ್ವಗಳ ಅಂತರಾರ್ಥವನ್ನು ಸ್ಪಷ್ಟಪಡಿಸುತ್ತಾರೆ. ಮಾನವ ಬದುಕಿನಲ್ಲಿ ಸಂಭವಿಸುವ ಸೋಲು ಗೆಲುವುಗಳ ಅರಿವು, ನಮ್ಮ ಆಂತರಿಕ ಮನಃಶ್ಚೇತನದಲ್ಲಿನ ಸಮತೋಲನದಲ್ಲಿ ವ್ಯತ್ಯಯ ಗಳಿಂದ ಉಂಟಾಗುವುದು ಅಲ್ಲದೆ ಈ ಸೋಲು ಗೆಲುವುಗಳು ಭಗವಂತನ ಸಂಕಲ್ಪದಂತೆ ಸಂಭವಿಸುತ್ತವೆಯೇ ಹೊರತು ನಿಜವಾಗಿಯೂ ನಾವು ಹೊಣೆಗಾರರಾಗುವುದಿಲ್ಲ. ಆದ್ದರಿಂದ ಸೋಲುಗೆಲುವುಗಳಿಗೆ ಕುಗ್ಗುವುದು ಹಿಗ್ಗುವುದು ಎರಡೂ ಸರಿಯಲ್ಲ. ಪ್ರಿಯ–ಅಪ್ರಿಯ, ಶುಭ–ಅಶುಭ–ಎಲ್ಲವೂ ಭಗವಂತನ ಸಂಕಲ್ಪದಂತೆ ಮಾನವ ವ್ಯಕ್ತಿಯ ವಿಕಾಸ ಕ್ರಮವೊಂದು ನಡೆದಿರುತ್ತದೆ. ಇಂತಹ ಅರವಿಂದರ ವಿಚಾರಗಳ ಸಾರ ಸಂಗ್ರಹವಾಗಿದೆ ಈ ಲೇಖನ.

ಮುಂದಿನ ಲೇಖನ ಶ್ರೀ ಅರವಿಂದರ ಪೂರ್ಣಯೋಗದ ಸಂಕ್ಷಿಪ್ತ ಪರಿಚಯಾತ್ಮಕ ಲೇಖನವಾಗಿದೆ. ಪೂರ್ಣಯೋಗ, ಅರವಿಂದರ ಹೊಚ್ಚ ಹೊಸ ಶೋಧನೆಯ ಫಲವಾಗಿ ಅನ್ಯಯೋಗ ಪದಗಳಿಗಿಂತ ಭಿನ್ನವಾದ ರೂಪದಲ್ಲಿ ಮೂಡಿಬಂದ ಚಿಂತನಫಲವಾಗಿದೆ. ಮಳಗಿಯವರು ಇದನ್ನು "ಸಾಮಾನ್ಯ ಅಜ್ಞಾನಮಯ ಪ್ರಜ್ಞೆಯೊಳಗಿಂದ ಹೊರಬಂದು, ಮೇಲೇರಿ ಹೋಗುವುದೊಂದೇ ಈ ಯೋಗದ ಗುರಿಯಲ್ಲ. ಮೇಲಿನ ದಿವ್ಯಚೇತನದ 'ಅತಿಮಾನಸ'ವೆಂಬ ಶಕ್ತಿಯನ್ನು ಮನ, ಪ್ರಾಣ, ದೇಹಗಳ ಜ್ಞಾನದಲ್ಲಿ ಕೆಳಗಿಳಿಸಿ ತಂದು, ಅವುಗಳ ಸಂಪೂರ್ಣ ಪರಿವರ್ತನೆಯನ್ನು ಸಾಧಿಸುವ ಘನವಾದ ಉದ್ದೇಶ ಇದರದಾಗಿದೆ ; ಮತ್ತು ಜಡದಲ್ಲಿ ದಿವ್ಯ ಜೀವನವನ್ನು ಸೃಷ್ಟಿಸುವುದಿದೆ." ಎಂದು ವಿವರಿಸಿದ್ದಾರೆ.

ಇಂತಹ ಯೋಗ ಸಾಧನೆ ಸಾಧ್ಯವಾಗುವುದು, ಪರಮಾತ್ಮನನ್ನು ಕುರಿತ ಉತ್ಕಟ ಅಭೀಪ್ಸೆ, ಆತ್ಮೈಕಾಗ್ರತೆಗಳಿಂದ ಮಾತ್ರ. ಮಾನವನ ಆಸೆ–ಆಕಾಂಕ್ಷೆಗಳ ಪೂರೈಕೆಗಾಗಲಿ, ಮನದ ವಿಚಾರಗಳ ಸಿದ್ಧಿಗೋಸುಗವಾಗಲಿ ಈ ಯೋಗ ಪ್ರಯೋಜನಕಾರಿ ಯಾಗಲಾರದು. ಏನಿದ್ದರೂ ಈ ಯೋಗದ ಉದ್ದೇಶ, ಭಗವಂತನ ಸಂಕಲ್ಪವು ತನ್ನ ದಿವ್ಯ ಸತ್ಯವನ್ನು ಪ್ರಕಟಿಸುವಂಥ ಜಗತ್ತೊಂದನ್ನು ಸೃಷ್ಟಿಸುವುದಾಗಿದೆ. ಅದಕ್ಕಾಗಿ ಸಮಗ್ರ ಯೋಗದ ಸಾಧಕ ತಾನು ಮಾಡುವ ಕೆಲಸ ತನ್ನ ಸ್ವಂತದ್ದೆಂದು ಭಾವಿಸದೆ ಭಗವಂತನ ಕೆಲಸವೆಂದ ಭಾವಿಸಿ ಆತನು ಹಾಕಿಕೊಡುವ ಕರಾರುಗಳಿಗೆ ಬದ್ಧನಾಗಿ ಮಾಡಬೇಕಾಗುತ್ತದೆ. ಆದ್ದರಿಂದ ಯಾವುದೇ ಬಗೆಯ ಅಹಂಕಾರ ದೃಷ್ಟಿಯನ್ನಾಗಲಿ, ಸ್ವಾರ್ಥಪರತೆಯಾಗಲಿ ಇಲ್ಲದಂತಾಗಿಸಿಕೊಂಡು ಆಧ್ಯಾತ್ಮಿಕ ಮುಕ್ತಿಯ ಕಡೆಗೆ ಸಾಗಬೇಕಾಗುತ್ತದೆ. ಅಂತರ್ ಬಹಿರ್ ಪರಿವರ್ತನೆ ಆಗುವವರೆಗೆ ಈ ಯೋಗಸಾಧನೆ ಮುಂದುವರೆಬೇಕು. ವಾಸ್ತವವಾಗಿ ಅರವಿಂದರ ಈ 'ಸಮಗ್ರಯೋಗ'ದ ಉದ್ದೇಶವೇ ಆಂತರಿಕ ಶಿಕ್ಷಣ ಮತ್ತು ಶಿಸ್ತುಗಳನ್ನು ರೂಢಿಸಿಕೊಳ್ಳುವುದಾಗಿದೆ, ಎನ್ನುವುದು ಮಳಗಿಯವರ ತೀರ್ಮಾನಿಕ ಗ್ರಹಿಕೆಯಾಗಿದೆ.

ಶ್ರೀ ಅರವಿಂದರ ಅಭಿಪ್ರಾಯದಲ್ಲಿ ಇಂದಿನ ಮಾನವ ತನ್ನನ್ನು ತಾನೇ ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ. ಹಾಗೆ ನೋಡಿದರೆ ಅರಿತುಕೊಳ್ಳಬೇಕೆಂಬ ಪ್ರಜ್ಞೆಯ ಹಂತವನ್ನೂ ತಲುಪಿಲ್ಲ. ಪೂರ್ಣಯೋಗ ಅಥವಾ ಸಮಗ್ರಯೋಗ ಮಾನವನನ್ನು ಪ್ರಾಣಿ ಸ್ತರದಿಂದ ಮೇಲೆತ್ತುವುದನ್ನು ಮಾನವನ ಮನೋವಿಕಾಸವನ್ನು ಗುರಿಯಾಗಿಸಿಕೊಂಡಿದೆ ಎಂದು ಹೇಳುತ್ತಾ ಶ್ರೀ ಮಾತೆಯವರ ಮಾತುಗಳನ್ನೂ ಪ್ರಸ್ತಾಪಿಸುತ್ತಾರೆ. ಶ್ರೀ ಅರವಿಂದರು ಈ ಭೂಮಿಯ ಮೇಲೆ ಅವತರಿಸಿರುವುದರ ಉದ್ದೇಶವೇ ಮಾನವನನ್ನು, ಪರಿಪೂರ್ಣ ಸಾಮರಸ್ಯವುಳ್ಳ, ಉತ್ತಮ, ಸುಂದರ ಹಾಗೂ ಸುಖಮಯವಾದ ಜೀವನವನ್ನು ನಡೆಸಬಲ್ಲ, ತುಂಬ ಜಾಗೃತ ಹಾಗೂ ಚೈತನ್ಯಭರಿತ, ಅತಿಮಾನಸ ಚೇತನಾವಸ್ಥೆಗೆ ತಲುಪಿಸುವುದಾಗಿದೆ. ಶ್ರೀ ಮಾತೆಯವರು, ಶ್ರೀ ಅರವಿಂದರ ಸಮಗ್ರ ಯೋಗದ ಸ್ವರೂಪ ಉದ್ದೇಶಗಳನ್ನು ಬಹುವಾಗಿ ಪುರಸ್ಕರಿಸಿ, ಸಾಧಕರಿಗೆ ಅದನ್ನು ಸರಳವಾದ ಮಾತುಗಳ ಮೂಲಕ ಪರಿಚಯಿಸುವ ಪ್ರಯತ್ನದಲ್ಲಿ, ಅವರು ನೀಡಿದ ವಿವರಗಳನ್ನು ಮಳಗಿಯವರು ಹೀಗೆ ದಾಖಲಿಸಿದ್ದಾರೆ.

ಪ್ರಾಚೀನ ಯೋಗಗಳು, ಅಜ್ಞಾನ, ದುಃಖ, ಯಾತನೆಗಳಿಂದ ಬಿಡುಗಡೆ ಗೊಳಿಸುವುದನ್ನೇ ಉದ್ದೇಶವಾಗಿ ಇರಿಸಿಕೊಂಡಿದ್ದವು. ಆದರೆ ಶ್ರೀ ಅರವಿಂದರ ಸಮಗ್ರ ಯೋಗವು "ನಮ್ಮೊಳಗಿನ ಚೇತನವನ್ನು ರೂಪಾಂತರಗೊಳಿಸುವುದರ ಜೊತೆಗೆ ಜೀವನವನ್ನು ರೂಪಾಂತರಗೊಳಿಸುವುದು. ನಮ್ಮ ಚೇತನದಂತೆಯೆ ನಮ್ಮ ಇಡಿಯ ಪ್ರಕೃತಿಯಾಗಿ ಎಂದರೆ ನಮ್ಮ ಮಾನ, ಪ್ರಾಣ ಮತ್ತು ದೇಹಗಳೂ ದಿವ್ಯ ಚೇತನದೊಂದಿಗೆ ಸಂಯೋಗ ಹೊಂದಬೇಕು. ಶ್ರೀ ಅರವಿಂದರು ವಿವರಿಸುವ ಆಧ್ಯಾತ್ಮಿಕ ರೂಪಾಂತರ ಸಮಗ್ರವಾದುದು. ಈ ರೂಪಾಂತರದ ಪರಿಣಾಮವಾಗಿ ದಿವ್ಯ ಶಾಂತಿ, ಶಕ್ತಿ, ಪ್ರಭೆ-ಇವು ನಮ್ಮ ಪ್ರತಿಯೊಂದು ವಿಚಾರ, ಭಾವನೆ, ಕೃತಿಗಳಲ್ಲಿ ವ್ಯಕ್ತವಾಗುತ್ತದೆ. ಜೀವನದ ಎಲ್ಲ ಶಕ್ತಿ ಸಾಮರ್ಥ್ಯಗಳು ಪರಿಪೂರ್ಣಗೊಳ್ಳುತ್ತವೆ. ವಿಕಾಸಗೊಳ್ಳುತ್ತವೆ" ಎಂದು ಹೇಳುತ್ತಾ ಇದಕ್ಕೆ ಸಂಬಂಧಿಸಿದಂತೆ ಅಭೀಪ್ಸೆ, ಚಿತ್ತೈಕಾಗ್ರತೆ, ಸಮರ್ಪಣೆ-ಇತ್ಯಾದಿಗಳ ಬಗ್ಗೆ ನೀಡಿದ ವಿಸ್ತೃತ ವಿವರಗಳನ್ನೂ ನೀಡಿದ್ದಾರೆ.

ಹಾಗೆಯೇ ಮುಂದುವರೆಯುತ್ತಾ, ಅಂತರಾತ್ಮ, ಚೈತ್ಯಪುರುಷ, ಚೈತ್ಯಾತ್ಮಕ ರೂಪಾಂತರ (Psychic Transformation), ಆಧ್ಯಾತ್ಮಿಕ ರೂಪಾಂತರ (Spiritual Transformation) ಮುಂತಾದ ಯೌಗಿಕ ಪರಿಕಲ್ಪನೆಗಳ ಬಗ್ಗೆ ಶ್ರೀಮಾತೆಯವರು ನೀಡುವ ವಿವರಗಳನ್ನು ಉಲ್ಲೇಖಿಸಿದ್ದಾರೆ.

ಶ್ರೀ ಅರವಿಂದರ, ಶ್ರೀ ಮಾತೆಯವರ, 'ಸಮಗ್ರಯೋಗ' ಸಂಬಂಧವಾದ ವಿಚಾರಗಳನ್ನು ಉಲ್ಲೇಖಿಸುತ್ತಾ ಕಡೆಯಲ್ಲಿ ಅದರ ಸಾರಾಂಶವನ್ನು ಮಳಗಿಯವರು ಹೀಗೆ ನೀಡಿದ್ದಾರೆ.

೧) ಮಾನವ ಜೀವನವನ್ನು ದಿವ್ಯತೆಯ ಪರಿಪೂರ್ಣತೆಗೆ (Divine perfection) ತಂದು ಮುಟ್ಟಿಸುವುದೇ ಸಮಗ್ರ ಯೋಗದ ಗುರಿ.

೨) ನಿಜವಾದ ಆಧ್ಯಾತ್ಮಿಕತೆ ಜೀವನವನ್ನು ತೊರೆದು ಪಲಾಯನ ಮಾಡುವುದಲ್ಲ. ಜೀವನವನ್ನು ಪರಿಪೂರ್ಣಗೊಳಿಸುವುದು–ದಿವ್ಯತೆಯ ಪರಿಪೂರ್ಣತೆಯನ್ನು ಅದಕ್ಕೆ ಒದಗಿಸುವುದು.

೩) ಭಗವಂತನು ಎಲ್ಲೆಲ್ಲೂ ಇರುವನೆಂಬುದನ್ನಷ್ಟೆ ಅರಿತರೆ ಸಾಲದು. ಜಗದ ಜೀವನವನ್ನೆಲ್ಲ ಇಡಿಯಾಗಿ ರೂಪಾಂತರಗೊಳಿಸುವುದು ಮುಖ್ಯ ಕಾರ್ಯ.

೪) ಈ ಯೋಗವು ಜೀವನದ ಶಕ್ತಿ ಸಾಮರ್ಥ್ಯಗಳನ್ನು ಬಳಸಕೂಡದೆಂದು ಹೇಳುವುದಿಲ್ಲ. ಈ ಶಕ್ತಿ ಸಾಮರ್ಥ್ಯಗಳ ಪರಿವರ್ತನೆಯನ್ನು ಸಾಧಿಸಬೇಕು. ಇದನ್ನೆ ಸಮಗ್ರ ರೂಪಾಂತರ ಎನ್ನುವುದು.

೫) ವೈಯಕ್ತಿಕ ಮುಕ್ತಿಯನ್ನು ಸಾಧಿಸಿಕೊಂಡು ಸುಮ್ಮನೆ ಕುಳಿತುಕೊಳ್ಳುವುದನ್ನು ಈ ಯೋಗವು ಒಪ್ಪುವುದಿಲ್ಲ. ಇದು ನೇತ್ಯರ್ಥಕ ಪ್ರವೃತ್ತಿ. ನಮ್ಮ ಸುತ್ತಣ ಸಮಾಜ ಮತ್ತು ಜಗತ್ತು ಸಾಕ್ಷಾತ್ಕಾರ ಪಡೆದವರಿಂದ ಪ್ರಗತಿಪರ ಪರಿವರ್ತನೆಯನ್ನು ನಿರೀಕ್ಷಿಸುತ್ತಿರುತ್ತದೆ. ಆದ್ದರಿಂದ ಈ ಪೂರ್ಣಯೋಗ ಕ್ರಿಯೆ ಮತ್ತು ಧ್ಯಾನಗಳೆರಡರ ಸಮತೂಕದ ಐಕ್ಯ ಸಾಧನೆಯನ್ನು ಕಾಯ್ದುಕೊಳ್ಳಲು ಬೋಧಿಸುತ್ತದೆ.

೬) ಮಾನವನ ಪ್ರಕೃತಿ ಪರವರ್ತನೆಯನ್ನು ಸಾಧಿಸಿದ ಯೋಗದಿಂದೇನು ಪ್ರಯೋಜನ? ಎಂದು ಅರವಿಂದರು ಪ್ರಶ್ನಿಸುತ್ತಾರೆ.

೭) 'ಪೂರ್ಣಯೋಗ'ದಲ್ಲಿ ಸಾಧನೆ ಮತ್ತು ಬಾಹ್ಯ ಜೀವನ ಇವುಗಳ ನಡುವೆ ಯಾವ ಭೇದವೂ ಇಲ್ಲ. ಜೀವನದ ಪ್ರತಿ ಕ್ಷಣದಲ್ಲೂ ಸತ್ಯಶೋಧನೆ ಮತ್ತು ಅದರ ಸಾಧನೆ ನಿರಂತರವಾಗಿ ನಡೆಯಬೇಕು.

೮) ಈ ಜೀವನದಲ್ಲಿಯೇ ದಿವ್ಯತ್ವವನ್ನು ಕಂಡುಕೊಳ್ಳಬೇಕು. ಈ ಅನ್ವೇಷಣೆಯಿಂದಲೇ ಜೀವನದ ಪರಿವರ್ತನೆ ಸಾಧ್ಯ. ಒಟ್ಟಾರೆಯಾಗಿ 'ಪೂರ್ಣಯೋಗ' 'ಈಸಬೇಕು ಇದ್ದು ಜಯಿಸಬೇಕು'–ಎಂಬುದನ್ನು ಅತ್ಯುನ್ನತ ಜೀವನಮೌಲ್ಯವಾಗಿ ಸ್ವೀಕರಿಸಿ, ಅದನ್ನೇ ಬೋಧಿಸುತ್ತದೆ.

ಮಳಗಿಯವರು, ಅರವಿಂದರ ಇಷ್ಟು ಸಂಕೀರ್ಣವಾದ 'ಪೂರ್ಣಯೋಗ'ದ ಸ್ವರೂಪವನ್ನು ಮತ್ತು ಅರ್ಥವನ್ನು ಎಷ್ಟು ಸೂಕ್ಷ್ಮವಾಗಿ ಗಮನಿಸಿದ್ದಾರೆ, ಅಧ್ಯಯನ ಮಾಡಿದ್ದಾರೆ ಎನ್ನುವುದಕ್ಕೆ ಈ ಮೊದಲು ಕಾಣಿಸಿದ ಸಾರಾಂಶದ ಅಂಶಗಳು ಸಾಕ್ಷಿಯಾಗಿದೆ.

ಸಂಪೂರ್ಣವಾಗಿ ಶ್ರೀ ಅರವಿಂದ ಮತ್ತು ಶ್ರೀ ಮಾತಾ ಅವರ ತತ್ವ ಚಿಂತನೆಗಳಿಗೆ ತೆತ್ತುಕೊಂಡದ್ದಷ್ಟೇ ಅಲ್ಲಿ ಅವುಗಳ ಪ್ರಸಾರ, ಪ್ರಚಾರಕ್ಕೂ ತಮ್ಮ ಬದುಕಿನ ಬಹು ದೀರ್ಘ ಕಾಲವನ್ನು ಮುಡಿಪಾಗಿ ಇರಿಸಿದ್ದರೆಂಬುದು ಅವರ ವಿಶ್ಲೇಷಣೆ ವ್ಯಾಖ್ಯಾನಗಳಿಂದ ಸಾಬೀತಾಗುತ್ತದೆ.

ಕಡೆಯ ಲೇಖನವೂ ಪೂರ್ಣಯೋಗ ಕುರಿತಾದ ತಮ್ಮ ಭಾಷಣ ಅಥವಾ ಉಪನ್ಯಾಸದ ಸಾರವಾಗಿದೆ. ವಾಸ್ತವವಾಗಿ ಇಡೀ ಭಾಷಣವೇ ಲೇಖನರೂಪವಾಗಿ ಸಂಕಲನದಲ್ಲಿ ಸೇರ್ಪಡೆಯಾಗಿದೆ.

ಹೀಗೆ ಮಳಗಿಯವರು ೨೩ ವರ್ಷಗಳ ಅರವಿಂದ ತತ್ವಚಿಂತನೆಗಳ ಅಧ್ಯಯನ ಅನುಸಂಧಾನದ ಮೂಲಕ ನೂರಾರು ಲೇಖನಗಳನ್ನು ಶ್ರೀ ಅರಬಿಂದೋ ಸೊಸೈಟಿಯ ವತಿಯಿಂದ ಹೊರಡುತ್ತಿದ್ದ ಅಖಿಲ ಭಾರತ ಪತ್ರಿಕೆಯ ಕನ್ನಡ ಅವತರಣಿಕೆಯಲ್ಲಿ ಪ್ರಕಟವಾಗಿ, ಅರವಿಂದರ ಚಿಂತನೆ ಪರಂಪರೆಗೆ ಅತ್ಯಂತ ಮಹತ್ವದ ಕೊಡುಗೆ ನೀಡಿದ್ದಾರೆ. ಅರವಿಂದರ ತತ್ವ ಚಿಂತನೆ, ಸಾಧನೆಗಳ ಭಾಗವಾಗಿ ತಮ್ಮ ಜೀವನದ ಅಮೂಲ್ಯ ಸಮಯವನ್ನು ವಿನಿಯೋಗಿಸಿದ್ದಾರೆ.

○

## ೪. ಸಮ್ಮೇಳನದ ಅಧ್ಯಕ್ಷೀಯ ಭಾಷಣ

ರಾಜಾಜಿನಗರ ವಿಧಾನಸಭಾ ಕ್ಷೇತ್ರದ ಕನ್ನಡ ಸಾಹಿತ್ಯ ಸಮ್ಮೇಳನ (೨೧-೦೬-೨೦೦೧)

## ಪ್ರೊ. ಎಸ್.ಆರ್. ಮಳಗಿ

ವೇದಿಕೆಯ ಮೇಲೆ ವಿರಾಜಮಾನರಾಗಿರುವ ಮಾನ್ಯರೇ, ಮತ್ತು ನನ್ನ ಆತ್ಮೀಯ ಅಣ್ಣ-ತಮ್ಮಂದಿರೆ, ಅಕ್ಕ-ತಂಗಿಯರೇ, ತಾಯಂದಿರೇ,

ರಾಜಾಜಿನಗರ ವಿಧಾನಸಭಾ ಕ್ಷೇತ್ರದ ಕನ್ನಡ ಸಾಹಿತ್ಯ ಪರಿಷತ್ತಿನ ಮಾನ್ಯ ಅಧ್ಯಕ್ಷರಾಗಿರುವ ಶ್ರೀ ಗಿರಿರಾಜರು, ಈ ಸಲದ ಈ ವಿಭಾಗದ ಸಾಹಿತ್ಯ ಸಮ್ಮೇಳನ ಅಧ್ಯಕ್ಷ ಪದಕ್ಕೆ ನನ್ನನ್ನು ಆಯ್ಕೆ ಮಾಡಿದ್ದಾಗಿ ತಿಳಿಸಿದಾಗ, ನನಗೆ ಆಶ್ಚರ್ಯವಾಯ್ತು. ನನಗಿಂತ ಕಿರಿಯರೂ ಉತ್ಸಾಹಭರಿತರೂ ಕ್ರಿಯಾಶೀಲರೂ ಆಗಿರುವವರನ್ನು ಬಿಟ್ಟು, ನನ್ನಂಥ ವಯಸ್ಸಾದ ಹಳಬನೊಬ್ಬನನ್ನು ಈ ಗೌವರದ  ಸ್ಥಾನಕ್ಕೆ ಕರೆತಂದು ಕೂರಿಸಿದ್ದು ಯಾರಿಗೂ ಆಶ್ಚರ್ಯವುಂಟು ಮಾಡುವಂಥದೇ ! ಆದರೆ ಶ್ರೀ ಗಿರಿರಾಜರೂ ಅವರೊಂದಿಗೆ ಬಂದಿದ್ದ ಕಾರ್ಯವಾಹಕ ಸಮಿತಿಯ ಸದಸ್ಯರೂ ಸರ್ವಾನುಮತದಿಂದ ನನ್ನನ್ನು ಆಯ್ಕೆ ಮಾಡಿದ್ದನ್ನು ತಿಳಿಸಿದರು. ಆದ್ದರಿಂದ ಅವರ ಈ ಗೌರವದ ಆಮಂತ್ರಣವನ್ನು ಸಂತೋಷದಿಂದ ಸ್ವೀಕರಿಸಿ, ತಮ್ಮ ಮುಂದೆ ಈಗ ನಿಂತಿದ್ದೇನೆ.

ಕನ್ನಡ ಸಾಹಿತ್ಯ ಪರಿಷತ್ತು ನಮ್ಮ ಕರ್ನಾಟಕ ರಾಜ್ಯದ ಒಂದು ಪ್ರತಿಷ್ಠಿತ ಸಂಸ್ಥೆ. ಇದರ ಅಂಗಸಂಸ್ಥೆಗಳಾಗಿ ಬೆಂಗಳೂರಿನ ವಿವಿಧ ಭಾಗಗಳಲ್ಲಿ ಮತ್ತು ರಾಜ್ಯದ ತಾಲ್ಲೂಕು-ಜಿಲ್ಲಾ ಸ್ಥಳಗಳಲ್ಲಿ ಹಲವಾರು ಕನ್ನಡ ಸಾಹಿತ್ಯ ಪರಿಷತ್ತುಗಳು ಕನ್ನಡದ ಸೇವಾ ಕಾರ್ಯ ನಡೆಸಿದ್ದು ತುಂಬ ಶ್ಲಾಘನೀಯ. ಕನ್ನಡದ ಸೇವೆಯ ವ್ಯಾಪ್ತಿ ಬಹು ದೊಡ್ಡದು. ಇಲ್ಲಿಯ 'ಕನ್ನಡ ಸಾಹಿತ್ಯ' ಎಂಬ ಮಾತು ಸಾಹಿತ್ಯ ಸೃಷ್ಟಿಯೊಂದಕ್ಕೆ ಸೀಮಿತವಲ್ಲ. ಕನ್ನಡ ನುಡಿಯ ಹಾಗೂ ನಾಡಿನ ಸರ್ವಾಂಗೀಣ ಅಭಿವೃದ್ಧಿಗೆ ಹಿತಕಾರಿಯಾಗುವ ಪ್ರತಿಯೊಂದು ಕಾರ್ಯವೂ ಕನ್ನಡ ಸಾಹಿತ್ಯ ಪರಷತ್ತಿನ ಪರಿಧಿಗೆ ಸಂಬಂಧಪಟ್ಟುದು.

ಕನ್ನಡ ಸಾಹಿತ್ಯವು ಒಂದು ಸಾವಿರ ವರುಷಕ್ಕೂ ಮಿಕ್ಕಿ ಬೆಳೆದು ಬಂದುದು. ಕನ್ನಡ ಜನೆಯ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತ ಬಂದುದು. ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ಮೂರು ಮುಖ್ಯ ಘಟ್ಟಗಳಲ್ಲಿ ಹಾಯ್ದು ಬಂದ ನಮ್ಮ ಸಾಹಿತ್ಯವು, ನಮ್ಮ ಜನೆಯ ಹಿತ ಸಾಧಿಸುತ್ತ ನಡೆದಿದೆ. ನಮ್ಮ ನಾಡಿನ ಸರ್ವಾಂಗೀಣ ಉನ್ನತಿಯ

ದೃಷ್ಟಿಯನ್ನಿರಿಸಿಕೊಂಡು, ಕನ್ನಡಿಗರನ್ನು ಸುಸಂಸ್ಕೃತಗೊಳಿಸುತ್ತ ಆಹ್ಲಾದಗೊಳಿಸುತ್ತ, ಅವರ ಜೀವನದ ಮಟ್ಟವನ್ನು ಎತ್ತರಿಸುತ್ತ ಸಾಗಿದೆ. ಸಾಹಿತ್ಯವು ಮಾಡಬೇಕಾದ ಕೆಲಸವೇ ಇದು. ಪ್ರಾಚೀನ ಕಾಲದಿಂದ, ಈವರೆಗೆ ನಮ್ಮ ನಾಡಿನ ಶ್ರೇಷ್ಠ ಕವಿಗಳು ತಮ್ಮ ಪ್ರತಿಭಾ ದೀಪ್ತಿಯಿಂದ ನಮ್ಮ ನಾಡ ಜನಮನವನ್ನೂ ಜನಜೀವನವನ್ನೂ ಉಜ್ವಲಗೊಳಿಸುತ್ತಲೇ ಇದ್ದಾರೆ. ಈ ಮಾತಿಗೆ ಜೀವಂತ ಸಾಕ್ಷಿ ಎಂದರೆ, ಹಳಗನ್ನಡದ ಪಂಪ-ರನ್ನಾದಿ ಚಂಪೂಕವಿಗಳು; ನಡುಗನ್ನಡದ ಬಸವ-ಅಲ್ಲಮಾದಿ ವಚನಕಾರರು; ಹರಿಹರ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶರೇ ಮೊದಲಾದ ಷಟ್ಪದಿಕಾರರು; ರತ್ನಾಕರವರ್ಣಿ, ಹೊನ್ನಮ್ಮ ಮುಂತಾದ ಸಾಂಗತ್ಯಕಾರರು; ಕನಕ-ಪುರಂದರರಂಥ ದಾಸವರೇಣ್ಯರು; ಮೂರು ಲೋಕಗಳನ್ನೂ ತ್ರಿಪದಿಗಳಲ್ಲಿ ಅಳೆದ ಸರ್ವಜ್ಞನಂಥ ಜ್ಞಾನಿಗಳು ; ಇವರೆಲ್ಲ ಕನ್ನಡಿಗರ ಹೃದಯ-ಸಂಪತ್ತನ್ನು ಹೆಚ್ಚಿಸುತ್ತಾ ಬೆಳಗಿದ್ದಾರೆ. ಅನಂತರ ಬಂದುದು ಹೊಸಗನ್ನಡದ ಅರುಣೋದಯ. ಇದನ್ನು ಸೃಷ್ಟಿಸಿದ ಮಹೋದಯರೆಂದರೆ, ಮುದ್ದಣ, ಬಸವಪ್ಪಶಾಸ್ತ್ರಿಗಳು, ತೂರಮರಿ ಶೇಷಗಿರಿರಾಯರು, ಶಾಂತಕವಿಗಳು, ಬಿ. ವೆಂಕಟಾಚಾರ್ಯರು, ಗಳಗನಾಥರು ಮುಂತಾದವರು. ಇವರು ಕೃಷ್ಣಪಕ್ಷದ ಕಗ್ಗತ್ತಲಲ್ಲಿ ಮಿಂಚಿ, ಮಿಣುಗಿ ದಾರಿತೋರಿದ ನಕ್ಷತ್ರ ರಾಜಿ, ತರುವಾಯ ಹೊಸಗನ್ನಡ ನವೋದಯದ ಉತ್ಥಾಪಕರೆನಿಸಿದ ಬಿ.ಎಂ. ಶ್ರೀಕಂಠಯ್ಯನವರು, ಪಂಜೆಮಂಗೇಶರಾಯರು, ಗೋವಿಂದಪೈಗಳು, ಡಿ.ವಿ. ಗುಂಡಪ್ಪ, ಮಾಸ್ತಿ, ಬೇಂದ್ರೆ, ಕುವೆಂಪು, ಪು.ತಿ.ನ., ಕೈಲಾಸಂ, ಸಂಸ, ಎ.ಎನ್. ಮೂರ್ತಿರಾಯರು, ಶ್ರೀರಂಗ, ಬೀಚಿ, ರಾಜರತ್ನಂ, ಶಿವರಾಮ ಕಾರಂತ, ಗೋಕಾಕ, ಅ.ನ. ಕೃಷ್ಣರಾವ್, ಗೋಪಾಲಕೃಷ್ಣ ಅಡಿಗ, ರಂ.ಶ್ರೀ ಮುಗಳಿ, ಕೆ.ಎಸ್. ನರಸಿಂಹಸ್ವಾಮಿ ಮುಂತಾದವರು ಕನ್ನಡದಲ್ಲಿ ನೂತನ ಸಾಹಿತ್ಯಸೃಷ್ಟಿಗೆ ಕಾರಣಕರ್ತರಾದವರು. ಈ ನವೋದಯದ ಸಾಹಿತ್ಯವಾಹಿನಿಗೆ ಪ್ರಗತಿಶೀಲ, ನವ್ಯ, ನವ್ಯೋತ್ತ,ರ, ದಲಿತ, ಬಂಡಾಯ ಮುಂತಾದ ಹೊಸಮಾದರಿಯ ಪ್ರವಾಹಗಳು ಸಂಗಮಿಸಿ, ಕನ್ನಡ ಸಾಹಿತ್ಯದ ಮಹಾಪೂರವೆಂದೂ ವಿಜೃಂಭಿಸಿದೆ. ಇದರಲ್ಲಿ ಧುಮುಕಿ, ಈಸುತ್ತ ಮುನ್ನುಗ್ಗುತ್ತಿರುವ ಸಾಹಿತಿಗಳೆಷ್ಟೋ ! ಎಣಿಕೆಗೆ ಸಿಲುಕದಷ್ಟಿದ್ದಾರೆ. ನೂರಾರು ಕವಿಗಳು, ಕತೆಗಾರರು, ಕಾದಂಬರಿಕಾರರು, ನಾಟಕಕಾರರು, ಲಲಿತ ಹಾಗೂ ವಿಚಾರ ಪ್ರಬಂಧಕಾರರು, ವಿಮರ್ಶಕರು, ಸಾಹಿತ್ಯ ಸಂಶೋಧಕರು ಇವರಲ್ಲಿ ಸಮಾವೇಶವಾಗುತ್ತಾರೆ. ಇದೆಲ್ಲ ಇಲ್ಲಿ ಸಭೆ ಸೇರಿದ ಸಾಹಿತ್ಯಾಸಕ್ತರಿಗೆ ಗೊತ್ತು.

ಕರ್ನಾಟಕ ಏಕೀಕೃತವಾಗುವ ಮುನ್ನ ಹಾಗೂ ಅನಂತರದ ಕನ್ನಡ ಸಾಹಿತ್ಯವಾಹಿನಿಯ ಸ್ಥೂಲ ದೃಶ್ಯವಿದು. ಆದರೆ, ಕನ್ನಡಿಗರು ಈ ಕ್ಷೇತ್ರದಲ್ಲಿ ಸಾಧಿಸಬೇಕಾದುದು ಇನ್ನೂ ಬಹಳಷ್ಟಿದೆ. ನಮ್ಮ ಜನ, ನಮ್ಮ ಮನ ಇನ್ನೂ ಹೆಚ್ಚಿನ ಎತ್ತರಕ್ಕೇರಬೇಕು. ಆಗ ನಮ್ಮ ನಾಡಿನ ಔನ್ನತ್ಯ ಹೆಚ್ಚುತ್ತದೆ.

ಕರ್ನಾಟಕದಲ್ಲಿ ನವೋದಯ ಸಾಹಿತ್ಯ ಮೊದಲು ಚಿಗುರಿದ್ದು ಭಾರತದ ಪ್ರಪ್ರಥಮ 'ನೋಬೆಲ್ ಲಾರಿಯೇಟ್' ಎಂಬ ಜಗತ್‌ಪ್ರಸಿದ್ಧ ಪ್ರಶಸ್ತಿಯನ್ನು ಗೆದ್ದ ಬಂಗಾಲದ ರವೀಂದ್ರನಾಥ ಟಾಗೋರರ ಪ್ರತಿಭಾ ಪ್ರಕಾಶದಲ್ಲಿ, ಅನಂತರ, ಪಾಶ್ಚಾತ್ಯ ರೋಮಾಂಟಿಕ್

ಕವಿಗಳ ಪ್ರಭಾವದಿಂದ. ರವೀಂದ್ರರು ಹಾಡಿದ ಒಂದು ಗೀತೆ ಕನ್ನಡಿಗರನ್ನು ಮೊಟ್ಟಮೊದಲು ಕಣ್‌ತೆರೆಯಿಸಿತು. ಆ ಗೀತೆಯ ಕನ್ನಡಾನುವಾದವನ್ನು ಇಲ್ಲಿ ಉದ್ಧರಿಸಬಯಸುತ್ತೇನೆ.

ನನ್ನ ಕಿರಿಯ ಮಿತ್ರರಾಗಿದ್ದ ಸದಾಶಿವ ಒಡೆಯರ್ ಅವರ ಭಾವಾನುವಾದವಿದು. ಗಮನವಿಟ್ಟು ಕೇಳಿರಿ:

ಮನವು ನಿರ್ಭೀತವಾಗಿರುವಲ್ಲಿ
ಮಾನ್ಯಮಸ್ತಕವು ಉನ್ನತದಿ ಮರೆವಲ್ಲಿ
ಸುಜ್ಞಾನ ಝರಿ ಧಾರಾಳ ಹರಿವಲ್ಲಿ
ಕೀಳ್ತರದ ಸ್ವಾರ್ಥಸಂಕುಚಿತ ಭಾವನೆಗಳಿಂ

ನಾಡು ತುಂಡಾಗದೆ ಅಖಂಡವಾಗಿರುವಲ್ಲಿ
ಚಿಮ್ಮತಿಹ ಬುಗ್ಗೆಯೋಲ್ ಸತ್ಯದಾಳದಿಂ
ಸಾಹಿತ್ಯ ಸದಾ ನೆಗೆಯುತ್ತಿರುವಲ್ಲಿ
ಸಾಧನೆಯು ನಿತ್ಯ ಪೂರ್ಣತೆಯ ಬಯಸುತ್ತಿರುವಲ್ಲಿ

'ತಿಳಿ'ಯ ಹೊಳೆ, ಮೂಢನಡತೆಗಳ
ಕೊಳೆಯಲ್ಲಿ ಹರಿದು ಕಶ್ಮಲವಾಗದಿರುವಲ್ಲಿ
ವಿವೇಕದ ಸಾಧನೆಯ ವಿಶಾಲತೆಯ ಹಿರಿಮೆಯೆಡೆ
ನೀಂ ಸದಾ ಕೈಹಿಡಿದು ನಡೆಸುತ್ತಿರುವಲ್ಲಿ,
ತಂದೆಯೆ, ಅಲ್ಲಿ ಆ ಸ್ವತಂತ್ರಸಗ್ಗದಲ್ಲಿ
ಆ ಸತ್ಯ ಸ್ವಪ್ನದಲ್ಲಿ ಎನ್ನೊಲುಮೆಯಾ ನಾಡು ಕಣ್ದೆರೆಯಲಿ !

ಇದು ಕವಿ ರವೀಂದ್ರರು ಕಂಡ ಸ್ವತಂತ್ರ ಭಾರತದ ಸವಿಗನಸು. ಅಂಥ ಸುಂದರ ಕನಸಿನ ಕರ್ನಾಟಕವನ್ನು ನಮ್ಮ ಕನ್ನಡಿಗರ ವೈವಿಧ್ಯಮಯ ಸಾಹಿತ್ಯವು ನಮ್ಮ ಕಣ್ಮುಂದೆ ರೂಪಿಸಲು ಯತ್ನಿಸುತ್ತಲೇ ಇದೆ. ಈ ಸಾಹಿತ್ಯಗಂಗೆಯ ಮಹಾಪೂರದಲ್ಲಿ ಕಸ-ರಸಗಳೆರಡೂ ಇರಬಹುದು. ಇದೇನಿದ್ದರೂ ಈ ಕನಸಿನ ಚಿತ್ರವಿನ್ನೂ ಪೂರ್ಣವಾಗಿಲ್ಲ. ಕನ್ನಡ ನಾಡಿನ ಸತ್ವಯುತ ಚೇತನಕ್ಕೆ ಈ ಸಿದ್ಧಿಯೇನೂ ಅಸಾಧ್ಯವಲ್ಲ. ಇದು ನನ್ನ ದೃಢವಾದ ನಂಬುಗೆ. ಎಲ್ಲದಕ್ಕೂ ಕಾಲ ಪಕ್ವವಾಗಬೇಕು, ಅಷ್ಟೇ.

ಇಂಥ ಕರ್ನಾಟಕ ಸರ್ವಾಂಗೀಣ ಉನ್ನತಿಯ ಸುಂದರ ಕನಸಿನ ಚಿತ್ರವನ್ನು ಏಕೀಕರಣಕ್ಕೆ ಮುನ್ನವೇ ಕಂಡು, ಕಂಡರಿಸಿದವರು ನನಗೆ ಪಿತೃಸದೃಶರಾಗಿದ್ದು, ಕರ್ನಾಟಕ ಕುಲಪುರೋಹಿತರೆಂದು ಪ್ರಖ್ಯಾತರಾಗಿದ್ದ ಆಲೂರವೆಂಕಟರಾಯರು. ಇವರು ಸಾಹಿತ್ಯವನ್ನು ಕುರಿತು ಒಂದೆಡೆ ಹೀಗೆ ಹೇಳಿದ್ದಾರೆ.

ಮನುಷ್ಯನ ಮನಸ್ಸಿನಲ್ಲಿ ಹುಟ್ಟುವ ಯಾವತ್ತೂ ವಿಕಾರಗಳಿಗೂ ವಿಚಾರಗಳಿಗೂ ವಾಣಿಯ (ಸರಸ್ವತಿಯ) ಅವಶ್ಯಕತೆಯುಂಟು. ಇಲ್ಲದಿದ್ದರೆ ವ್ಯವಹಾರವೆಲ್ಲವೂ ಕಟ್ಟಾಗುವುದು. ಮನದೊಳಗೆ ಜನಿಸಿದ ಹೊಸ ಭಾವನೆ, ಹೊಸ ಕಲ್ಪನೆ, ಹೊಸ

ವಿಚಾರ ಇವುಗಳೆಲ್ಲಕ್ಕೂ ಮೂರ್ತ ಸ್ವರೂಪವನ್ನು ಕೊಡುವುದು ವಾಣಿ. ಈ ಕಾರ್ಯವನ್ನು ಉತ್ಕೃಷ್ಟವಾಗಿ ನೆರವೇರಿಸುವ ವಾಙ್ಮಯವೇ ಉಜ್ವಲ ವಾಙ್ಮಯ. ನಿರ್ಜೀವವಾದ ಜನಾಂಗದಲ್ಲಿ ಸಜೀವವಾದ ವಾಙ್ಮಯವು ಹುಟ್ಟಲಾರದು. ಕರ್ನಾಟಕ ವಾಙ್ಮಯವೆಂದರೆ ಭಾರತದ ಜನಜೀವನವನ್ನು ಒಂದು ವಿಶಿಷ್ಟವಾದ ಎರಕದಲ್ಲಿ ಹಾಕಿ ಮಾಡಿದ ಮೂರ್ತಿ. ಆದ್ದರಿಂದ ಕರ್ನಾಟಕದ ವಾಙ್ಮಯದಲ್ಲಿ ಇವರೆಡೂ ಸಂಸ್ಕೃತಿಗಳು ಎಂದರೆ ಭರತಖಂಡ ಮತ್ತು ಕರ್ನಾಟಕ ಇವರೆಡೂ ಸಂಸ್ಕೃತಿಗಳು ಪ್ರತಿ–ಫಲಿತವಾಗಿರಬೇಕು. ನಮ್ಮ ರೋಮ ರೋಮಗಳಲ್ಲಿ ರಾಷ್ಟ್ರೀಯತ್ವವೂ ಕರ್ನಾಟಕತ್ವವೂ ತುಂಬಿದ್ದರೆ ಮಾತ್ರವೇ ನಮ್ಮಿಂದ ಅತ್ಯಂತ ಉಜ್ವಲವಾದ ವಾಙ್ಮಯವು ಹುಟ್ಟಬಹುದು. ಇಲ್ಲದಿದ್ದರೆ ಎಂದೂ ಅಂಥದು ಹುಟ್ಟಲಾರದು. ಸಾರಾಂಶವೆಂದರೆ, – ನಾವು ವಿಶ್ವಸಂಸ್ಕೃತಿಯನ್ನೂ ಒಳಗೊಂಡ ರಾಷ್ಟ್ರೀಯತ್ವವನ್ನೂ ಕರ್ನಾಟಕತ್ವವನ್ನೂ ಯಾವಾಗಲೂ ಅನುಸಂಧಾನ ಮಾಡಬೇಕು. ಮತ್ತು ಈ ದೃಷ್ಟಿಯಿಂದ ಜೀವಂತ–ವಾಙ್ಮಯವನ್ನು ಹುಟ್ಟಿಸುವುದಕ್ಕೆ ಪ್ರವೃತ್ತರಾಗಬೇಕು" ಆಲೂರ ವೆಂಕಟರಾಯರ ಈ ಉದ್ಗಾರಗಳು ಚಿಂತನಾರ್ಹವಾಗಿಲ್ಲವೆ ?

ಸಾಹಿತ್ಯರಚನೆ ಬರಿ ಸಾಹಿತ್ಯಕ್ಕಾಗಿ ಅಲ್ಲ. ಕನ್ನಡಿಗರು ತಮ್ಮನ್ನು ತಾವು ಮೊದಲು ಅರ್ಥ ಮಾಡಿಕೊಳ್ಳಬೇಕು. 'ತನ್ನರಿವೆಗುರು' ಎಂಬುದು ಅರ್ಥಗರ್ಭಿತವಾದ ಮಂತ್ರ. ಕನ್ನಡತನ ಅಥವಾ ಕರ್ನಾಟಕತ್ವವನ್ನು ಸರಿಯಾಗಿ ಅರ್ಥೈಸಿಕೊಳ್ಳಬೇಕು. ಇಂದು ಕರ್ನಾಟಕವು ರಾಜಕೀಯವಾಗಿ ಒಂದಾಗಿದೆ. ಆದರೆ ನಿಜವಾಗಿ ಕನ್ನಡಿಗರೆಲ್ಲರ ಮನಸ್ಸು ಒಂದಾಗಿದೆಯೆ ? ಇದನ್ನು ನಾವೆಲ್ಲರೂ ಚಿಂತನೆಗೆ ಒಳಪಡಿಸಿಕೊಳ್ಳಬೇಕಾದ ಕಾಲವಿಂದು ಒದಗಿದೆ. ಏಕೀಕರಣಕ್ಕೆ ಮುನ್ನ ತುಂಡು ತುಂಡಾಗಿ ಹರಿದು ಹಂಚಿಹೋಗಿದ್ದ ನಮ್ಮ ನಾಡು ಇಂದು ರಾಜಕೀಯವಾಗಿ ಒಂದಾಗಿದೆಯೇನೋ ನಿಜ. ಆದರೆ ಇಂದಿನ ಅಖಂಡ ಕರ್ನಾಟಕದಲ್ಲಿಯೂ ಉತ್ತರ ಕರ್ನಾಟಕದವರು, ಹೈದರಾಬಾದ್ ಕರ್ನಾಟಕದವರು, ಮೈಸೂರು ಕರ್ನಾಟಕದವರು ಎಂಬ ಭೇದ ಭಾವನೆಗಳು ಪೂರ್ತಿಯಾಗಿ ಎಲ್ಲ ಜನಮನದಿಂದ ಅಳಿಸಿ ಹೋಗಿರುವವೆ ? ಹಾಗೆಯೆ ಜಾತಿ–ಮತಗಳ ಭಾವೈಕ್ಯ ಕನ್ನಡಿಗರಾದ ನಮ್ಮಲ್ಲಿ ಬಂದಿದೆಯೆ ? ಹಾಗೆಯೆ, ಗಡಿನಾಡ ಕನ್ನಡಿಗರ ಗೋಳು ಮಾಯವಾಗಿದೆಯೆ ? ಕೊಡಗು–ಕಾಸರಗೋಡುಗಳ, ಬೆಳಗಾಂವಿ–ನಿಪ್ಪಾಣಿಗಳ, ಕಲಬುರ್ಗಿ–ಬೀದರ್‌ಗಳ ಗಡಿಗಳಲ್ಲಿಯ ಕನ್ನಡಿಗರ ಸಮಸ್ಯೆಗಳ ಬಗ್ಗೆ ಕಾಳಜಿ, ಕಳಕಳಿ ಎಷ್ಟು ಜನಕ್ಕಿದೆ ? ಮೆಹರ್‌ಚಂದ್ ಮಹಾಜನ್ ವರದಿ ಪೂರ್ತಿಯಾಗಿ ಮಲಗಿಯೇ ಬಿಟ್ಟಿದೆಯಲ್ಲ ? ಇದಕ್ಕೆ ಕಾರಣ ಕನ್ನಡಿಗರ ಆಲಸ್ಯವೆನ್ನೋಣವೆ ? ಅಜ್ಞಾನವೆನ್ನೋಣವೆ ? ನಮ್ಮ ಜನ ಜಾಗೃತರಾಗದೆ ಹೋದಲ್ಲಿ ನಮ್ಮನ್ನು ಪ್ರತಿನಿಧಿಸುವ ಸರ್ಕಾರವು ಎಚ್ಚರಗೊಳ್ಳದು. ಈಗ ನಮ್ಮ ಜನ ಹಾಗೂ ನಮ್ಮ ಪ್ರಜಾಪ್ರಭುತ್ವ ಸರ್ಕಾರಗಳು ಈ ದೆಸೆಯಲ್ಲಿ ಮಾಡುತ್ತಾ ಬಂದಿರುವ ಪ್ರಯತ್ನಗಳೆಲ್ಲ ವ್ಯರ್ಥವಾಗುತ್ತ ಬಂದಿರುವುದು ಯಾರಿಗೆ ಗೊತ್ತಿಲ್ಲ ? ಶಕ್ತಿ ಕೇಂದ್ರದ ಎಂ. ಚಿದಾನಂದಮೂರ್ತಿಯವರು ಹಾಗೂ ಅವರ ಸಹಯೋಗಿಗಳು ಕಳಕಳಿಯಿಂದ ಮಾಡುತ್ತಾ ಬಂದ ಪ್ರಯತ್ನಗಳೆಲ್ಲ ಬಹುಮಟ್ಟಿಗೆ ಜನತೆಯಲ್ಲಿ ಜಾಗೃತಿಯುಂಟು ಮಾಡಿದ್ದರೂ ಈವರೆಗೆ ಯಾವ ಫಲಿತಾಂಶವು ಕಾಣದಲ್ಲ?

ಕರ್ನಾಟಕದ ವಿವಿಧ ಭಾಗಗಳಲ್ಲಿಯ ಕನ್ನಡಿಗರಲ್ಲಿ ಭಾವೈಕ್ಯ ಹುಟ್ಟದೆ, ಜನಜಾಗೃತಿ ಯುಂಟಾಗದೆಂದೇ ತೋರುತ್ತದೆ. ಒಂದು ಕಾಲಕ್ಕೆ ಬೇರೆ ಬೇರೆ ಆಡಳಿತಗಳಲ್ಲಿ ಹರಿದು ಹಂಚಿಹೋಗಿದ್ದ ಕನ್ನಡಿಗರಲ್ಲಿ ಪರಸ್ಪರ ಸೌಹಾರ್ದಭಾವ ಹುಟ್ಟಲು ಇನ್ನೂ ಕೆಲಕಾಲ ಬೇಕೇನೋ ಎನಿಸಿದೆ. ಕನ್ನಡಿಗರ ಸ್ವಭಾವದೋಷವಿದು ಎನ್ನೋಣವೆ ? ನೆರೆಹೊರೆಯ ರಾಜ್ಯಗಳಾದ ತಮಿಳುನಾಡು, ಮಹಾರಾಷ್ಟ್ರ, ಆಂಧ್ರಪ್ರದೇಶಗಳಲ್ಲಿಯ ಜನಗಳ ಹಾಗೂ ಸರ್ಕಾರಗಳ ಆಕ್ರಮಣಶೀಲತೆಯೆನ್ನೋಣವೇ ? ಇದೇನಿದ್ದರೂ ಕನ್ನಡಿಗರು ತಮ್ಮನ್ನು ತಾವರಿತುಕೊಳ್ಳಲು, ಜಾಗೃತರಾಗಲು ನಮ್ಮ ಸಾಹಿತ್ಯವಾಣಿ ಜ್ವಲಂತವಾಗಿ ಉರಿದೇಳಬೇಕೇನೋ ಎನಿಸಿದೆ !

ಇಲ್ಲಿ ಒಂದು ಕಿವಿಮಾತನ್ನು ನನ್ನ ಪ್ರೀತಿಯ ಕನ್ನಡ ಬಾಂಧವರಿಗೆ ಹೇಳಬೇಕೆನ್ನುವೆ. ಅದಾವುದೆಂದರೆ, ನಮ್ಮ ನೆರೆಹೊರೆಯ ರಾಜ್ಯಗಳ ಜನರ ಹಾಗೆ ಮತ್ತು ಸರ್ಕಾರಗಳ ಹಾಗೆ ನಾವೂ ನಮ್ಮ ಸರ್ಕಾರಗಳೂ ಆಕ್ರಮಣಶೀಲರಾಗುವುದು ಬೇಡ. ಈ ಬಗ್ಗೆ ನಾವು ನಡೆಸುವ ಹೋರಾಟಗಳು ಅತಿರೇಕಕ್ಕೆ ಹೋಗದೆ, ಪರಸ್ಪರ ಹೊಂದಾಣಿಕೆಯ ದಾರಿ ಹಿಡಿದು ಪ್ರಾಮಾಣಿಕ ವಿಚಾರ–ವಿನಿಮಯಗಳ ಮೂಲಕ ಪರಸ್ಪರ ಸ್ನೇಹ–ಸೌಹಾರ್ದಗಳನು ಬೆಳೆಸಿಕೊಳ್ಳುವುದು ಉಚಿತ ಎಂದು ನನ್ನ ಸಲಹೆ, ಅಷ್ಟೆ. ವ್ಯಕ್ತಿ–ವ್ಯಕ್ತಿಗಳ ನಡುವೆ ಹೇಗೋ ಹಾಗೆ, ನಮ್ಮ ರಾಜ್ಯ ರಾಜ್ಯಗಳ ನಡುವೆ ಸ್ನೇಹ ಸಂಬಂಧ ಕುದರಲಾರದೆ ? ಉದಾತ್ತ ಸಂಸ್ಕೃತಿಯ ಭರತವರ್ಷದ ಪ್ರಜೆಗಳೇ ನಾವೆಲ್ಲರೂ ಅಲ್ಲವೆ ? ಬಸವಣ್ಣ, ಗಾಂಧೀಜಿಯಂಥ ಮಹಾತ್ಮರು ಹುಟ್ಟಿ ಬೆಳೆದ ನಾಡವರು ನಾವಲ್ಲವೆ ? ಅವರು ಬೋಧಿಸಿದ ತತ್ವಗಳನ್ನು ನಾವು ನಮ್ಮ ಬಾಳಿನಲ್ಲಿ ಅಳವಡಿಸಲಾರವೆ?

ಕನ್ನಡಿಗರಾದ ನಾವು ಹಿಂದೆ ಹೇಗಿದ್ದೆವು ? ಇಂದು ಹೇಗಿದ್ದೇವೆ ? ಎಲ್ಲರೂ ಯೋಚಿಸಬೇಕು. ಒಂದು ಸಾವಿರ ವರುಷಗಳ ಹಿಂದೆ ರಚನೆಗೊಂಡ ಕನ್ನಡದ ಪ್ರಪ್ರಥಮ ಕೃತಿ ಕವಿರಾಜಮಾರ್ಗದಲ್ಲಿ ಕನ್ನಡಿಗರನ್ನು, ಕನ್ನಡನಾಡನ್ನು ಆ ಕವಿ ಬಣ್ಣಿಸಿದ್ದು ಹುರುಳಿಲ್ಲದ್ದೆ ? ಅಲ್ಲ, "ಕಾವೇರಿಯಿಂದ ಗೋದಾವರಿವರೆಗೂ ಹರಡಿದ್ದ ಈ ಕನ್ನಡ ನಾಡಿನಲ್ಲಿ ನೆಲಸಿದ್ದ ಜನಪದವು ಸಾಮಾನ್ಯವಾದುದಲ್ಲ. ಈ ವಸುಧಾವಲಯದಲ್ಲಿ ವಿಲೀನವಾಗಿರುವ ನಾಡುಗಳಲ್ಲೆಲ್ಲ ವಿಶಿಷ್ಟವಾದುದು ಕನ್ನಡನಾಡು. ಕನ್ನಡಿಗರು ಹದವರಿತು ನುಡಿಯುವವರು, ನುಡಿದುದನ್ನು ಪರೀಕ್ಷಿಸಿ, ವಿಮರ್ಶಿಸಬಲ್ಲವರು. ನಿಜವಾಗಿಯೂ ಇವರು ಚದುರರು. ಉದ್ದೇಶಪೂರ್ವಕ ಓದದೆ ಇದ್ದರೂ ಕಾವ್ಯಪ್ರಯೋಗ ಪರಿಣತಮತಿಗಳು ಎಂದರೆ ಕವಿಗಳು, ಕಾವ್ಯಜ್ಞರು : ಕಲಿತು ವಿದ್ಯಾವಂತರಾಗದವರೂ ತಂತಮ್ಮ ನುಡಿಗಳಲ್ಲಿ ಎಲ್ಲರೂ ಜಾಣರು. ಕನ್ನಡದ ಚಿಕ್ಕ ಚಿಕ್ಕ ಮಕ್ಕಳೂ ಮಾತು ಬಾರದ ಮೂಕರೂ ವಿವೇಕವನ್ನು ಇತರರಿಗೆ ಅರುಹಬಲ್ಲವರು, ಅಲ್ಲದೆ, ಈ ನಾಡಿಗರು ಸುಭಟರು, ಕವಿಗಳು, ನಾಡನಾಳಬಲ್ಲ ಒಳ್ಳೆಯ ಪ್ರಭುಗಳು, ಚೆಲುವರು, ಹುಟ್ಟುಜಾಣರು, ಸದ್ಗುಣಿಗಳು, ಅಭಿಮಾನಿಗಳು, ಅತ್ಯುಗ್ರರು, ಗಭೀರಚಿತ್ತರು, ವಿವೇಕಿಗಳು". ಕವಿರಾಜಮಾರ್ಗಕಾರನ ಈ ಬಣ್ಣನೆಯಲ್ಲಿಯ ಪ್ರತಿಯೊಂದು ಮಾತೂ ಕನ್ನಡಿಗರ ಸ್ವಭಾವವನ್ನು ಪರೀಕ್ಷಿಸಿ ಖಚಿತಪಡಿಸಿಕೊಂಡು ನುಡಿದುದು. ಕನ್ನಡಿಗರ ಬಗ್ಗೆ ಇಂಥ

ಬಣ್ಣನೆ ನೂರಾರು ಸಾವಿರಾರು ಶಿಲಾಶಾಸನಗಳಲ್ಲೂ ತಾಮ್ರಪಟಗಳಲ್ಲೂ ತಾಳೆಯೋಲೆಗಳಲ್ಲೂ ಕಂಡಬರುತ್ತದೆ. ಇದು ನಮ್ಮ ಸಂಸ್ಕೃತಿಯ ಹಿರಿಮೆ. ಈ ಹಿರಿಮೆಯನ್ನು ನಮ್ಮ ಇಂದಿನ ಜನ, ಇಂದಿನ ನಮ್ಮ ಸಾಹಿತಿಗಳು, ಸರ್ಕಾರದ ಮಂತ್ರಿವರ್ಗದವರು ಅರ್ಥ ಮಾಡಿಕೊಳ್ಳಬೇಕು. ಮನಸ್ಸಿನಲ್ಲಿ ಚಿಂತಿಸಿ, ಚಿಂತಿಸಿ ಮನನ ಮಾಡಿಕೊಂಡು ಜೀವನದಲ್ಲಿ ಕಾರ್ಯರೂಪಕ್ಕಿಳಿಸಬೇಕು.

ನಮ್ಮ ಈ ನಾಡಿನಲ್ಲಿ ಹೊರಗಿನಿಂದ ಬಂದು ನೆಲಸಿರುವ ಅಧಿಕಾರಿ ವರ್ಗದವರಿಗೆ, ವ್ಯವಹಾರಸ್ಥರಿಗೆ, ವ್ಯಾಪಾರಿಗಳಿಗೆ, ಉದ್ಯೋಗಸ್ಥರಿಗೆ, ವಿದ್ಯಾಭ್ಯಾಸಕ್ಕಾಗಿ ಬಂದಿರುವ ವಿದ್ಯಾರ್ಥಿ ವರ್ಗದವರಿಗೂ ಒಂದು ಕಿವಿಮಾತನ್ನು ಹೇಳಬಯಸುತ್ತೇನೆ. ಅವರು ಚಿತ್ತೈಸಿ ಕೇಳುವರೆ? ಕನ್ನಡ ನಾಡಿನಲ್ಲಿ ನೆಲಸಿರುವವರೆಲ್ಲರೂ ಕನ್ನಡಿಗರು. ಕನ್ನಡವು ತಾಯಿ ನುಡಿಯಾಗಿರುವವರು ಮಾತ್ರವಲ್ಲ, ಕರ್ನಾಟಕದಲ್ಲಿ ನೆರೆಹೊರೆ ರಾಜ್ಯಗಳಿಂದ ಬಂದು ಬಹುಕಾಲದಿಂದ ನೆಲಸಿರುವ, ವಾಸವಾಗಿರುವ, ಆರ್ಥಿಕ, ಸಾಮಾಜಿಕ ಹಿತ-ಸಂಬಂಧಗಳನ್ನು ಬೆಳೆಸಿಕೊಂಡಿರುವ ಎಲ್ಲರೂ ಕನ್ನಡಿಗರು. ಇಂತಹವರು ತಂತಮ್ಮ ಭಾಷೆ, ಸಂಸ್ಕೃತಿಗಳನ್ನು ಉಳಿಸಿಕೊಂಡೂ ಕನ್ನಡಕ್ಕೆ ತಮ್ಮೆಲ್ಲ ವ್ಯವಹಾರಗಳಲ್ಲಿ ಮೊದಲ ಸ್ಥಾನವನ್ನೀಯಬೇಕು. ತಂತಮ್ಮ ವ್ಯಾಪಾರ ಉದ್ಯಮ ಮುಂತಾದ್ದರ ಅಭಿವೃದ್ಧಿಗೋಸುಗ, ಕರ್ನಾಟಕದ ಸೇವೆ ಮಾಡುವ ದೃಷ್ಟಿಯಿಂದ, ಇಲ್ಲಿಯ ಸಾಮಾಜಿಕ, ಸಾಂಸ್ಕೃತಿಕ ಜೀವನದಲ್ಲಿ ಪಾಲುಗೊಳ್ಳುವ ದೃಷ್ಟಿಯಿಂದ ಕನ್ನಡದಲ್ಲಿ ಸಾಕಷ್ಟು ಚೆನ್ನಾಗಿ ಮಾತನಾಡುವ ಹಾಗೂ ಬರೆಯುವ ಕಲೆಯನ್ನು ರೂಢಿಸಿಕೊಳ್ಳಬೇಕು.

ಕನ್ನಡ ಸಾಹಿತ್ಯ-ಸಂಸ್ಕೃತಿಗಳನ್ನು ಪರಿಚಯ ಮಾಡಿಕೊಳ್ಳಬೇಕು. ಪ್ರಾಮಾಣಿಕವಾಗಿ, ಪ್ರಜ್ಞಾಪೂರ್ವಕವಾಗಿ, ಆಸಕ್ತಿ ವಹಿಸಿ ಇಲ್ಲಿಯ ಜೀವನ ಪ್ರವಾಹದಲ್ಲಿ ಸಮರಸವಾಗಿ ಬೆರೆಯಬೇಕು. ತಮ್ಮ ಹಿತಕ್ಕಾಗಿಯೇ ಈ ಬಗೆಯ ಯತ್ನಕ್ಕೆ ತೊಡಗಬೇಕು. ಈ ಮಾತು ಕರ್ನಾಟಕದ ಹೊರಗಡೆ ಬೇರೆ ಬೇರೆ ರಾಜ್ಯಗಳಲ್ಲಿ ವಾಸಿಸುವ ಕನ್ನಡಿಗರಿಗೂ ಅನ್ವಯಿಸುವಂಥದೆಂದು ಬೇರೆ ಹೇಳಬೇಕಾಗಿಲ್ಲ. ಕನ್ನಡಿಗರು ತಾವು ನೆಲಸಿದಲ್ಲೆಲ್ಲ ಸಾಮರಸ್ಯದಿಂದ ಸಹಜೀವನ ನಡೆಸಿದ್ದಾರೆಂಬುದನ್ನು ನಾನು ಪ್ರತ್ಯಕ್ಷ ಕಂಡಿದ್ದೇನೆ.

**ಕೊನೆಯ ಮಾತು:** ಕನ್ನಡ ಸಂಸ್ಕೃತಿಯಲ್ಲಿ ಎದ್ದು ಕಾಣುವ ಗುಣ ಪರಮತ ಸಹಿಷ್ಣುತೆ. ಪರರ ವಿಚಾರವನ್ನೂ ಪರಮತವನ್ನೂ ಸಹನೆಯಿಂದ ಅರ್ಥ ಮಾಡಿಕೊಳ್ಳುವಲ್ಲಿಯೇ ನಮ್ಮ ಸ್ವಭಾವದ ಸಿರಿವಂತಿಕೆ ಇದೆ ಎಂಬ ವಿವೇಕವಾಣಿಯೂ ಕವಿರಾಜಮಾರ್ಗಕಾರನದೇ. ಪ್ರಾಚೀನ ಕಾಲದ ಅರಸರು, ಕವಿಗಳು, ಪಂಡಿತರು, ಜನಸಾಮಾನ್ಯರೂ ಕೂಡ ಬಾಳಿನಲ್ಲಿ ಅನುಸರಿಸುತ್ತ ಬಂದ ಸದಾಚಾರವಿದು. "ಸಹನಾವವತು, ಸಹನೌಭುನಕ್ತು, ಸಹವೀರ್ಯಂಕರವಾವಹೈ, ತೇಜಸ್ವಿನಾವಧೀತಮಸ್ತು, ಮಾವಿದ್ವಿಷಾವಹೈ" ಎಂಬ ಉಪನಿಷದ್ವಾಣಿಯನ್ನು ಹೃದ್ಗತ ಮಾಡಿಕೊಂಡು ಎಲ್ಲರೊಂದಿಗೆ ಪ್ರೀತಿಯಿಂದ, ಸ್ನೇಹದಿಂದ ವರ್ತಿಸೋಣ ; ಕೂಡಿ ಬಾಳೋಣ; ಕೂಡಿ ಉಣ್ಣೋಣ; ಕೂಡಿ ಕರ್ತೃತ್ವಶಾಲಿಗಳಾಗಿ ವೀರರಾಗಿ ಜೀವಿಸೋಣ. ಯಾರನ್ನೂ ದ್ವೇಷಿಸುವುದು

ಅಲ್ಲ. ಈ ಉಪನಿಷದ್ವಾಣಿ ಕನ್ನಡ ಸಾಹಿತ್ಯದಲ್ಲೂ ಸಂಸ್ಕೃತಿಯಲ್ಲೂ ಹಾಸುಹೊಕ್ಕಾಗಿದೆ. ಪರರೊಡನೆ ಸಹಜೀವನ, ಸಾಮರಸ್ಯ ಇವು ಕನ್ನಡಿಗರಲ್ಲಿ ಹುಟ್ಟುಗುಣವಾಗಿದೆ. ಒಮ್ಮೊಮ್ಮೆ ಅತಿ ಎನಿಸುವಂತೆಯೂ ಈ ಗುಣ ಬೆಳೆದಿದೆಯೆಂದೂ ಕೆಲವರ ಮತ. ಅಹುದು, ನಾವು ಔಚಿತ್ಯವರಿತು ಜೀವಿಸಬೇಕು ಎಂಬ ಮಾತೂ ನಮ್ಮ ಸಂಸ್ಕೃತಿಯಲ್ಲಿ ಹಾಗೂ ಸಾಹಿತ್ಯದಲ್ಲಿ ಹಲವೆಡೆಗಳಲ್ಲಿ ವ್ಯಕ್ತವಾಗಿದೆ.

ಹಾಗೆಯೆ, "ಮನುಷ್ಯಜಾತಿ ತಾನೊಂದೆವಲಂ" ಎಂಬ ಪಂಪವಾಣಿಯೂ ಒಂದಿದೆ. ಹುಟ್ಟಿನಿಂದ ಜಾತಿಯಿಲ್ಲ, ಇರಕೂಡದು; ಗುಣದಿಂದ ಮತ್ತು ತನ್ನ ವರ್ತನೆಯಿಂದ ಮನುಷ್ಯನು ತನ್ನತನವನ್ನು ವರ್ಧಿಸಿಕೊಳ್ಳಬೇಕೆಂಬ ಸಂದೇಶ ಘನವಾದುದು. ಕನ್ನಡ ಸಾಹಿತ್ಯ–ಸಂಸ್ಕೃತಿಯ ಘನತೆ ಇಲ್ಲಿ ಗೋಚರಿಸಿದೆ. ಕೊನೆಗೆ ಇನ್ನೊಂದು ಮಾತು.

ಕನ್ನಡ ನಾಡಿನಲ್ಲಿ ಪರರ ಆಕ್ರಮಣಶೀಲ ವರ್ತನೆಯಿಂದ ಕನ್ನಡ ಉಳಿದೀತೆ ಎಂಬ ಸಂದೇಹವನ್ನು ಕೆಲವರು ವ್ಯಕ್ತಪಡಿಸಿದ್ದನ್ನು ನಾನು ಕಂಡಿದ್ದೇನೆ. ಈ ಸಂದೇಹಕ್ಕೆ ನಾವು ಇಂಬುಗೊಡವುದು ಬೇಡ. ಸಾವಿರಾರು ವರುಷಗಳಿಂದ ಹಲವಾರು ಬಗೆಯ ದಾಳಿಗಳನ್ನೆದುರಿಸಿ, ಉಳಿದು ಬೆಳೆದು ಬಂದುದು ನಮ್ಮ ಕನ್ನಡ, ನಮ್ಮ ಕರ್ನಾಟಕ ಇಂದಿಗೂ ನಮ್ಮ ಕವಿಗಳು, ಕಾದಂಬರಿಕಾರರು, ನಾಟಕಾರರು, ಕತೆಗಾರರು, ಮೌಲಿಕ ಸಾಹಿತ್ಯ ರಚನೆಯಲ್ಲಿ ತೊಡಗಿರುವುದು ಯಾರಿಗೆ ಗೊತ್ತಿಲ್ಲ ? ಜ್ಞಾನಪೀಠ ಪ್ರಶಸ್ತಿ ನಮ್ಮ ನಾಡಿನ ಏಳು ಜನ ಗಣ್ಯ ಸಾಹಿತಿಗಳಿಗೆ ದೊರೆತಿದೆ ! ಇದು ಕನ್ನಡದ ಕೆಚ್ಚಿಗೆ ಪ್ರತ್ಯಕ್ಷ ಸಾಕ್ಷಿ ! ಕನ್ನಡ ಭುವನೇಶ್ವರಿಯ ಲೀಲೆ ! ಹೀಗಿರುವಾಗ, ಕನ್ನಡಕ್ಕೆ ಅಳಿವಿನಭಯ ವೆಲ್ಲಿ? ಆಲೂರ ವೆಂಕಟರಾಯರು ಈ ಬಗ್ಗೆ ಕೂಗಿ ಹೇಳುವುದನ್ನು ಕೇಳಿರಿ "ಕನ್ನಡಿಗರೇ, 'ಕರ್ನಾಟಕ' ಎಂಬ ಒಂದು ಶಬ್ದದಲ್ಲಿ ಎಂಥ ಅದ್ಭುತವಾದ ಮಾಂತ್ರಿಕ ಶಕ್ತಿ ತುಂಬಿರುವುದೆಂಬುದನ್ನು ಲಕ್ಷ್ಯಕ್ಕೆ ತನ್ನಿರಿ ! ಕರ್ನಾಟಕದ ಅರಸರು ಹೋದರು ; ಕವಿಗಳು ಹೋದರು ; ಸಂಪತ್ತು ಹೋಯಿತು ; ವೈಭವವೂ ಹೋಯಿತು. ಆದರೆ 'ಕರ್ನಾಟಕ' ಎಂಬ ಶಬ್ದವು ಮಾತ್ರ ಇನ್ನೂ ಉಳಿದಿದೆ. ಅದು ದ್ರೌಪದಿಯ ಅಕ್ಷಯ ಪಾತ್ರೆಯ ಅಗುಳಿನಂತಿದೆ. ಶ್ರೀಕೃಷ್ಣ ಪರಮಾತ್ಮನ ಕೃಪೆಯಿಂದ ನಾವು ಇದೊಂದು ಅಗುಳಿನಿಂದ ಸಾವಿರಾರು ಜನರ ಹಸಿವೆಯನ್ನು ಹಿಂಗಿಸಬಹುದು. ಆದಕಾರಣ, ಕನ್ನಡಿಗರೇ, ಕರ್ನಾಟಕ ಸಂಸ್ಕೃತಿ ಎಂಬ ಗುಪ್ತಗಾಮಿನಿಯಾದ ಗಂಗೆಯನ್ನು ಮೇಲಕ್ಕೆ ಎತ್ತಿ ತರೋಣ, ಏಳಿರಿ, ಇದೀಗ ನಮ್ಮ ಮುಖ್ಯ ಕರ್ತವ್ಯ" ಋಷಿ ಸದೃಶ ಜೀವನ ನಡೆಸಿದ ಆಲೂರ ವೆಂಕಟರಾಯರ ಈ ಕೂಗು ಯಾರನ್ನು ಬಡಿದೆಬ್ಬಿಸದು ?

ಹಾಗೆಯೆ, ಕನ್ನಡದ ನವ್ಯ ಕಾವ್ಯದ ಪುರಸ್ಕೃತರಲ್ಲೊಬ್ಬರಾದ ಗೋಪಾಲಕೃಷ್ಣ ಅಡಿಗರ ಈ ಕರೆಯನ್ನು ಕೇಳಿ.

ನಮ್ಮ ಉಸರು, ನಮ್ಮ ಕಸುವು ಕನ್ನಡ
ನಮ್ಮ ಹೆಸರು, ನಮ್ಮ ಕಸುಬು ಕನ್ನಡ
ಕನ್ನಡವಿದು ಕನ್ನಡ–

ಬನ್ನಿ ನಮ್ಮ ಸಂಗಡ;
ಒಂದಾಗುವ ಎಂದೆದ್ದರೆ ತಡೆವ ಬಂಟರೆಲ್ಲಿ ?
ಕನ್ನಡ ಜನ ಕವಿದೆದ್ದರೆ ನಿಲುವ ಗಂಡರೆಲ್ಲಿ ?

ಇನ್ನೊಬ್ಬ ನವೋದಯ–ನವ್ಯ ಕವಿಯಾದ ನಿಸ್ಸಾರ್ ಅಹ್ಮದರ

ನಿತ್ಯೋತ್ಸವ ತಾಯಿ ! ನಿತ್ಯೋತ್ಸವ
ನಿನಗೆ ನಿತ್ಯೋತ್ಸವ !

ಎಂಬ ಅಮಿತೋತ್ಸಾಹದ ಹಾಡಿನೊಂದಿಗೆ ಕನ್ನಡಿಗರಾದ ನಾವೆಲ್ಲರೂ ದನಿಗೂಡಿಸೋಣ. ಕನ್ನಡ ನವೋದಯದ ಅಗ್ರಕವಿ ಬಿ.ಎಂ. ಶ್ರೀಕಂಠಯ್ಯನವರ ಕನ್ನಡ ತಾಯ್ನೋಟ ಕವನದ ಈ ಪಂಕ್ತಿಗಳನ್ನು ಉದ್ಗರಿಸಿ ನನ್ನ ಮಾತು ಮುಗಿಸುತ್ತೇನೆ.

ಒಕ್ಕೊರಲಲೆಲ್ಲರೂ ಕೂಗಿ ಈ ಒಕ್ಕೂಗ–
ಈ ಹಿರಿಯ ಕೂಗ
ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ
ಸಿರಿಗನ್ನಡ ಗೆಲ್ಗೆ, ಬಾಳ್ಗೆ–
ಕನ್ನಡದ ತಾಯ್ ಗೆಲ್ಗೆ, ಬಾಳ್ಗೆ !

ಎಲ್ಲರಿಗೂ ನಮಸ್ಕಾರ.

○

# ೫. ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ ಪುಸ್ತಕಗಳು

ತಮ್ಮ ತೀರ ಚಿಕ್ಕಂದಿನ ಪುಸ್ತಕದ ಓದನ್ನು ಕುರಿತು ಗಾಂಧೀಜಿಯವರು ಹೀಗೆ ಹೇಳಿದ್ದಾರೆ:

"ಪಠ್ಯಪುಸ್ತಕಗಳನ್ನು ಹೊರತುಪಡಿಸಿ ಬೇರೆ ಏನನ್ನೂ ಓದುವುದು ಸಾಧಾರಣವಾಗಿ ನನಗೆ ಸೇರುತ್ತಿರಲಿಲ್ಲ. ನಿತ್ಯದ ಪಾಠಗಳನ್ನಂತೂ ಓದಲೇಬೇಕಾಗಿತ್ತು. ಉಪಾಧ್ಯಾಯರು ನನ್ನನ್ನು ಗದರಿಸುವುದು ನನಗೆ ಇಷ್ಟವಿರಲಿಲ್ಲ. ಅವರಿಗೆ ಮೋಸ ಮಾಡಲೂ ನನಗೆ ಇಷ್ಟವಿರಲಿಲ್ಲ. ಆದುದರಿಂದ ಪಾಠವನ್ನೇನೋ ಓದುತ್ತಿದ್ದೆ. ಆದರೆ ಪಾಠದಲ್ಲಿ ಮನಸ್ಸು ಇರುತ್ತಿರಲಿಲ್ಲ. ಹೀಗೆ ಪಾಠಗಳನ್ನೇ ಸರಿಯಾಗಿ ಓದುತ್ತಿರಲಿಲ್ಲವೆಂದ ಮೇಲೆ, ಇನ್ನು ಇತರ ಹೆಚ್ಚಿನ ವ್ಯಾಸಂಗದ ಪ್ರಶ್ನೆ ಎಲ್ಲಿ ಬಂತು ? ಆದರೆ ನಮ್ಮ ತಂದೆ ಕೊಂಡು ತಂದಿದ್ದ ಒಂದು ಪುಸ್ತಕ ಹೇಗೋ ನನ್ನ ಕಣ್ಣಿಗೆ ಬಿತ್ತು. ಅದರ ಹೆಸರು "ಶ್ರವಣ ಪಿತೃಭಕ್ತಿ ನಾಟಕ". ಅದನ್ನು ನಾನು ಅತ್ಯಂತ ಆಸಕ್ತಿಯಿಂದ ಓದಿದೆ. ಅದೇ ಸಮಯದಲ್ಲಿ ಸಂಚಾರಿ ಬೊಂಬೆ ಪ್ರದರ್ಶಕರು ನಮ್ಮ ಊರಿಗೆ ಬಂದರು. ಅವರು ನನಗೆ ತೋರಿಸಿದ ಒಂದು ಚಿತ್ರ, ಶ್ರವಣಕುಮಾರ ತನ್ನ ಕುರುಡು ತಂದೆ ತಾಯಿಯರನ್ನು ಅಡ್ಡೆಯಲ್ಲಿ ಕೂರಿಸಿಕೊಂಡು ಅದನ್ನು ಹೆಗಲ ಮೇಲೆ ಹೊತ್ತುಕೊಂಡು ಯಾತ್ರೆಗಾಗಿ ಹೋಗುತ್ತಿದ್ದ ಚಿತ್ರ, ಆ ಪುಸ್ತಕ, ಆ ದೃಶ್ಯ ಎರಡೂ ನನ್ನ ಅಂತರಂಗದಲ್ಲಿ ಶಾಶ್ವತವಾಗಿ ಮುದ್ರೆಯೊತ್ತಿದವು. "ಇಗೋ, ಇಲ್ಲಿ ನಿನಗೊಂದು ಆದರ್ಶವಿದೆ. ಅದನ್ನು ಅನುಕರಿಸು" ಎಂದು ನನಗೆ ನಾನೇ ಹೇಳಿಕೊಂಡೆ. ಶ್ರವಣಕುಮಾರ ಮರಣ ಹೊಂದಲು, ಅವನ ಮಾತಾಪಿತೃಗಳ ಆರ್ತವಿಲಾಪ ನನ್ನ ಕಿವಿಗೆ ಈಗಲೂ ಕೇಳುವಂತಿದೆ. ಆ ರಾಗ ನನ್ನ ಹೃದಯವನ್ನು ಕರಗಿಸಿತು. ನಮ್ಮ ತಂದೆ ಕೊಂಡುಕೊಟ್ಟಿದ್ದ ರಾಗಮಾಲಿಕೆಯಲ್ಲಿ ಅದನ್ನು ಬಾರಿಸಲು ಕಲಿತೆ.

ಮತ್ತೊಂದು–ನಾಟಕಕ್ಕೆ ಸಂಬಂಧಿಸಿದಂತೆ ಇದೇ ಬಗೆಯ ಪ್ರಸಂಗ. ಆ ನಾಟಕ ಹರಿಶ್ಚಂದ್ರ ನಾಟಕ. ಅದು ನನ್ನ ಮನಸ್ಸನ್ನು ಸೂರೆಗೊಂಡಿತು. ಅದನ್ನು ಎಷ್ಟು ನೋಡಿದರೂ ನನಗೆ ತೃಪ್ತಿಯೇ ಇಲ್ಲ. ಅದರ ಹುಚ್ಚು ನನ್ನನ್ನು ಹಗಲು ರಾತ್ರಿ ಬಿಡಲೇ ಇಲ್ಲ. ಲೆಕ್ಕವಿಲ್ಲದಷ್ಟು ಸಲ ನಾನೇ ಹರಿಶ್ಚಂದ್ರನಾಗಿ ಆ ನಾಟಕವನ್ನು ಅಭಿನಯಿಸಿಕೊಂಡೆ. "ಎಲ್ಲರೂ ಏಕೆ ಹರಿಶ್ಚಂದ್ರನಂತೆ ಸತ್ಯಸಂಧರಾಗಿರಬಾರದು ?" ಎಂಬುದೇ ಹಗಲೂ ರಾತ್ರಿ ನನ್ನನ್ನು ನಾನೇ.ಕೇಳಿಕೊಳ್ಳುತ್ತಿದ್ದ ಪ್ರಶ್ನೆ.

ಸತ್ಯವನ್ನು ಅನುಸರಿಸಬೇಕು. ಹರಿಶ್ಚಂದ್ರ ಸತ್ಯಕ್ಕಾಗಿ ಪಟ್ಟ ಕ್ಲೇಶವನ್ನೆಲ್ಲ ಆಪತ್ತುಗಳನ್ನೆಲ್ಲ ನಾನೂ ಪಡಬೇಕು. ಇದೊಂದೇ ನನ್ನ ಮನಸ್ಸಿನಲ್ಲಿ ಸ್ಫುರಿಸಿದ ಆದರ್ಶ. ಹರಿಶ್ಚಂದ್ರನ ಕಥೆಯನ್ನು ನಾನು ಅಕ್ಷರಶಃ ನಂಬಿದೆ. ನೆನಪು ಮಾಡಿಕೊಂಡು ಪದೇ ಪದೇ ಅಳುತ್ತಿದ್ದೆ. ಹರಿಶ್ಚಂದ್ರ ಐತಿಹಾಸಿಕ ವ್ಯಕ್ತಿ ಆಗಿರಲಾರ ಎಂಬುದು ಇಂದು ನನ್ನ ಬುದ್ಧಿಗೆ ಗೋಚರಿಸುತ್ತಿದೆ. ಆದರೆ ನನ್ನ ಮಟ್ಟಿಗೆ ಹರಿಶ್ಚಂದ್ರ, ಶ್ರವಣಕುಮಾರ ಇಬ್ಬರೂ ಜೀವಂತ ವ್ಯಕ್ತಿಗಳು ಆ ನಾಟಕಗಳನ್ನು ಓದಿದರೆ ಮತ್ತೆ ಮೊದಲಿನಂತೆ ಕಣ್ಣೀರು ಹಾಕದೆ ಇರಲಾರೆನೆಂಬುದು ನನ್ನ ನಂಬಿಕೆ.

ನನ್ನ ಮದುವೆಯಾದ ಸಮಯದಲ್ಲಿ ದಾಂಪತ್ಯಪ್ರೇಮ, ಮಿತವ್ಯಯ, ಬಾಲ್ಯವಿವಾಹ ಇವೇ ಮೊದಲಾದ ವಿಷಯಗಳನ್ನು ಕುರಿತ ಕಿರುಹೊತ್ತಗೆಗಳು ಅಚ್ಚಾಗಿ, ಕಾಸಿಗೊಂದರಂತೆಯೋ ಕಾಲಾಣೆಗೊಂದರಂತೆಯೋ ಮಾರಾಟವಾಗುತ್ತಿದ್ದವು. ಅವು ನನ್ನ ಕೈಗೆ ಸಿಕ್ಕಿದಾಗ ನಾನು ಅವುಗಳನ್ನು ಮೊದಲಿನಿಂದ ಕೊನೆಯವರೆಗೆ ಓದುತ್ತಿದ್ದೆ. ನನಗೆ ಇಷ್ಟವಿಲ್ಲದುದನ್ನು ಮರೆಯುವುದು, ಒಪ್ಪಿಗೆಯಾದುದನ್ನು ಆಚರಿಸುವುದು ನನ್ನ ಸ್ವಭಾವವಾಗಿತ್ತು. ಏಕಪತ್ನೀವ್ರತ ಪತಿಯ ಧರ್ಮವೆಂದು ಅದರಲ್ಲಿ ಓದಿದೆ. ಸರಿ, ಅದು ನನ್ನ ಹೃದಯದ ಮೇಲೆ ಅಚ್ಚಳಿಯದ ಪ್ರಭಾವ ಬೀರಿತು. ಸತ್ಯಪ್ರೇಮ ನನ್ನ ಸ್ವಭಾವದಲ್ಲಿಯೇ ಇತ್ತು. ಆದುದರಿಂದ ಪತ್ನಿಗೆ ದ್ರೋಹ ಮಾಡುವ ಪ್ರಶ್ನೆಯೇ ಇರಲಿಲ್ಲ. ಅಂತಹ ಬಾಲ್ಯದಲ್ಲಿ ಏಕಪತ್ನೀವ್ರತ ಭಂಗಕ್ಕೆ ಅವಕಾಶವೆಲ್ಲಿ?

ನಮ್ಮ ಚಿಕ್ಕಪ್ಪನ ಮಗ ರಾಮಾಯಣದ ಪ್ರೇಮಿಯಾಗಿದ್ದ. ನಾನೂ ಮತ್ತು ನನ್ನ ಎರಡನೆಯ ಅಣ್ಣನೂ ರಾಮರಕ್ಷೆ ಕಲಿಯಲು ಆತನು ಏರ್ಪಾಟು ಮಾಡಿದ. ನಾವು ಅದನ್ನು ಬಾಯಿಪಾಠ ಮಾಡಿಕೊಂಡು ಪ್ರತಿದಿನ ಸ್ನಾನ ಮುಗಿದ ಮೇಲೆ ಪಠಿಸುವ ನಿಯಮ ಮಾಡಿಕೊಂಡೆವು. ಆದರೆ ನನ್ನ ಹೃದಯದಲ್ಲಿ ಅಳಿಯದೆ ಉಳಿದ ಬೀಜ ರಾಮಾಯಣ ಪಾರಾಯಣದ್ದು. ಕಾಯಿಲೆಯ ಹೆಚ್ಚು ಭಾಗವನ್ನು ನಮ್ಮ ತಂದೆಯವರು ಪೋರ್‌ಬಂದರದಲ್ಲಿ ಕಳೆದರು. ಅಲ್ಲಿ ಅವರು ಪ್ರತಿರಾತ್ರಿಯೂ ರಾಮಾಯಣವನ್ನು ಕೇಳುತ್ತಿದ್ದರು. ಅಲ್ಲಿ ರಾಮಾಯಣದ ಕಥೆಯನ್ನು ಮಾಡುತ್ತಿದ್ದವರು ಶ್ರೀರಾಮಚಂದ್ರನ ಪರಮಭಕ್ತರಾದ ಬಿಲೇಶ್ವರದ ರಾಧಾಮಹಾರಾಜರೆಂಬವರು. ಅವರ ಸ್ವರ ಮಧುರವಾಗಿತ್ತು. ಅವರು ದ್ವಿಪದಿ ಚೌಪದಿಗಳನ್ನು ಹಾಡಿ ಅವುಗಗಳಿಗೆ ಅರ್ಥ ಹೇಳುತ್ತಿದ್ದರು. ಅವರು ಅದರಲ್ಲಿ ತಲ್ಲೀನರಾಗುತ್ತಿದ್ದರಲ್ಲದೆ ಶ್ರೋತೃಗಳನ್ನೂ ತಲ್ಲೀನಗೊಳಿಸುತ್ತಿದ್ದರು. ಆಗ ನನಗೆ ಹದಿಮೂರು ವಯಸ್ಸು ಮಾತ್ರವಾಗಿತ್ತು. ಆದರೂ ನನ್ನ ಮನಸ್ಸು ಅದರಲ್ಲಿ ಪೂರ್ಣವಾಗಿ ಲೀನವಾಗಿತ್ತು. ನನಗೆ ರಾಮಾಯಣದ ವಿಷಯದಲ್ಲಾದ ಅತ್ಯಂತ ಪ್ರೇಮದ ತಳಹದಿ ಈ ಕಥಾಶ್ರವಣದಿಂದಲೇ ಆದುದು. ತುಲಸೀದಾಸರ ರಾಮಾಯಣ ಭಕ್ತಿಮಾರ್ಗದ ಸರ್ವೋತ್ತಮ ಗ್ರಂಥವೆಂದು ಈಗ ನಾನು ಭಾವಿಸುತ್ತೇನೆ.

ಅನಂತರ ಕೆಲವು ತಿಂಗಳಿಗೆ ನಾವು ರಾಜಕೋಟೆಗೆ ಬಂದೆವು. ಅಲ್ಲಿ ರಾಮಾಯಣದ ರೀತಿಯ ಕಥೆ ನಡೆಯುತ್ತಿರಲಿಲ್ಲ. ಆದರೆ ಪ್ರತಿ ಏಕಾದಶಿಯಲ್ಲಿ ಅಲ್ಲಿ ಭಾಗವತ ಪಾರಾಯಣ

ನಡೆಯುತ್ತಿತ್ತು. ನಾನು ಆಗಾಗ ಅಲ್ಲಿ ಹೋಗಿ ಕುಳಿತುಕೊಳ್ಳುತ್ತಿದ್ದೆ. ಪಠಣದಿಂದ ವಾಚಕನಲ್ಲಿ ಧರ್ಮಭಾವ ಹುಟ್ಟಿಸಬಲ್ಲ ಗ್ರಂಥಭಾಗವತವೆಂದು ಇಂದು ನನಗೆ ಗೊತ್ತು. ಅದರ ಗುಜರಾತೀ ಅನುವಾದವನ್ನು ನಾನು ತುಂಬ ಉತ್ಸಾಹದಿಂದ ಓದಿದೆ. ನನ್ನ ಉಪವಾಸ ಕಾಲದಲ್ಲಿ ಮೂಲ ಭಾಗವತದ ಕೆಲವು ಭಾಗಗಳನ್ನು ಭಾರತ ಭೂಷಣ ಪಂಡಿತ ಮದನಮೋಹನ ಮಾಳವೀಯರ ಶ್ರೀವಾಣಿಯಿಂದ ಭಾಗವತವನ್ನು ಕೇಳಿದ್ದರೆ ಆಗಲೇ ನನಗೆ ಇದರಲ್ಲಿ ಗಾಢ ಪ್ರೀತಿ ಹುಟ್ಟುತ್ತಿದ್ದಿತು ಎನ್ನಿಸಿತು. ಚಿಕ್ಕ ವಯಸ್ಸಿನಲ್ಲಿ ಓದಿದ ಗ್ರಂಥಗಳ ಶುಭಾಶುಭ ಸಂಸ್ಕಾರ ನಮ್ಮ ಮನಸ್ಸಿನಲ್ಲಿ ಶಾಶ್ವತವಾಗಿ ನಿಲ್ಲುತ್ತದೆ. ಈ ಕಾರಣದಿಂದ ನನ್ನ ಬಾಲ್ಯದಲ್ಲಿ ಅಂತಹ ಸದ್ಗ್ರಂಥಗಳನ್ನು ಇನ್ನೂ ಹೆಚ್ಚಾಗಿ ಕೇಳಲು ಅವಕಾಶವಾಗಲಿಲ್ಲವಲ್ಲ ಎಂದು ನನಗೆ ಶಾಶ್ವತ ಪಶ್ಚಾತ್ತಾಪವುಂಟಾಗಿದೆ.

ನಮ್ಮ ತಂದೆಯವರ ಬಳಿ ಯಾರಾದರೂ ಜೈನ ಸನ್ಯಾಸಿಗಳು ಯಾವಾಗಲೂ ಇರುತ್ತಲೇ ಇದ್ದರು. ತಂದೆಯವರು ಅವರನ್ನು ಆದರದಿಂದ ಸತ್ಕರಿಸುತ್ತಿದ್ದರು. ಅವರು ತಂದೆಯವರೊಂದಿಗೆ ಧಾರ್ಮಿಕ ಮತ್ತು ವ್ಯಾವಹಾರಿಕ ಚರ್ಚೆಯನ್ನೂ ಮಾಡುತ್ತಿದ್ದರು. ಇದಲ್ಲದೆ ನಮ್ಮ ತಂದೆಯವರಿಗೆ ಮುಸಲ್ಮಾನ ಮತ್ತು ಪಾರಸೀ ಮಿತ್ರರೂ ಇದ್ದರು. ಅವರು ತಮ್ಮ ತಮ್ಮ ಧರ್ಮಗಳ ವಿಷಯವಾಗಿ ನಮ್ಮ ತಂದೆಗೆ ಹೇಳುತ್ತಿದ್ದರು. ಈ ಮಾತುಗಳನ್ನು ನಮ್ಮ ತಂದೆಯವರು ಆದರದಿಂದಲೂ ಪ್ರೇಮಭಾವದಿಂದಲೂ ಕೇಳುತ್ತಿದ್ದರು. ನಾನು ನಮ್ಮ ತಂದೆಯವರ ಶುಶ್ರೂಷೆಯಲ್ಲಿರುತ್ತಿದ್ದುದರಿಂದ ಬಹು ಸಮಯ ಅಲ್ಲಿಯೇ ಕುಳಿತಿರುತ್ತಿದ್ದೆ. ಈ ಎಲ್ಲ ವಿಷಯಗಳ ಪರಿಣಾಮವಾಗಿ ನನ್ನ ಮನಸ್ಸಿನಲ್ಲಿ ಇತರ ಧರ್ಮಗಳ ವಿಷಯದಲ್ಲೂ ಸಮಾನಭಾವ ಉಂಟಾಯಿತು.

ನಾನು ಇತರ ಧರ್ಮಗಳನ್ನು ಹೀಗೆ ಸಮಭಾವದಿಂದ ಕಾಣುತ್ತಿದ್ದುದರಿಂದ ನನಗೆ ಈಶ್ವರನಲ್ಲಿ ನಿಜವಾದ ಶ್ರದ್ಧಾಭಕ್ತಿ ಇದ್ದಿತೆಂದು ಭಾವಿಸಕೂಡದು. ಆ ಸಮಯದಲ್ಲಿ ನನ್ನ ತಂದೆಯ ಪುಸ್ತಕ ಸಂಗ್ರಹದಲ್ಲಿದ್ದ ಮನುಸ್ಮೃತಿಯ ಭಾಷಾಂತರದ ಒಂದು ಪ್ರತಿ ನನಗೆ ಸಿಕ್ಕಿತು. ಅದರಲ್ಲಿ ಸೃಷ್ಟಿಯ ಉತ್ಪತ್ತಿ ಮೊದಲಾದ ವರ್ಣನೆಯನ್ನು ಓದಿದೆ. ನನಗೆ ಅದರಲ್ಲಿ ಶ್ರದ್ಧೆ ಉಂಟಾಗಲಿಲ್ಲ. ಅದರ ಬದಲು ಸ್ವಲ್ಪ ನಾಸ್ತಿಕತೆ ಉಂಟಾಯಿತು. ಮನುಸ್ಮೃತಿಯ ಖಾದ್ಯಾಖಾದ್ಯ ಪ್ರಕರಣದಲ್ಲಿಯೂ ಬರುವ ವಿಷಯ ಪ್ರಚಲಿತ ಪದ್ಧತಿಗಳಿಗೆ ವಿರೋಧವಾಗಿರುವಂತೆ ತೋರಿತು. ಬುದ್ಧಿ ವಿಕಾಸವಾದಾಗ ಈ ವಿಷಯಗಳನ್ನು ಇನ್ನೂ ಚೆನ್ನಾಗಿ ಓದಿ ಮನನ ಮಾಡೋಣ ಎಂದು ಸಮಾಧಾನ ಮಾಡಿಕೊಂಡೆ.

ನಾನು ಮನುಸ್ಮೃತಿಯನ್ನು ಓದಿ ಅಹಿಂಸೆಗೆ ಪ್ರೇರಣೆಯನ್ನಂತೂ ಕಲಿಯಲಿಲ್ಲ. ಮಾಂಸಾಹಾರಕ್ಕೆ ಮನುಸ್ಮೃತಿಯಲ್ಲಿ ಸಮರ್ಥನೆ ದೊರೆಯಿತು. ಹಾವು, ತಿಗಣೆ ಮುಂತಾದುವನ್ನು ಕೊಲ್ಲುವುದು ನೀತಿ ಎಂದು ತಿಳಿದಿದ್ದೆ. ಆ ಸಮಯದಲ್ಲಿ ನಾನು ಧರ್ಮವೆಂದು ತಿಳಿದು ತಿಗಣೆ ಮುಂತಾದುವನ್ನು ಕೊಂದುದು ಜ್ಞಾಪಕವಿದೆ.

ಆದರೆ ಒಂದು ವಿಷಯ, ಈ ಸೃಷ್ಟಿ ನೀತಿಯ ತಳಹದಿಯ ಮೇಲೆ ನಿಂತಿದೆಯೆಂದೂ ನೀತಿಯ ಸಮಾವೇಶವು ಸತ್ಯದಲ್ಲಾಗುತ್ತದೆಂದೂ ನನ್ನ ಮನಸ್ಸಿನ ಮೇಲೆ ಚೆನ್ನಾಗಿ

ಅಚ್ಚು ಒತ್ತಿತು. ಸತ್ಯೋಪಾಸನೆಯೇ ನನ್ನ ಮುಖ್ಯ ಗುರಿಯಾಯಿತು. ಸತ್ಯದ ಮಹಿಮೆ ದಿನ ದಿನಕ್ಕೂ ನನ್ನ ದೃಷ್ಟಿಯಲ್ಲಿ ಹೆಚ್ಚಾಗುತ್ತ ಹೋಯಿತು. ಅದರ ವಿಷಯದ ನನ್ನ ವ್ಯಾಖ್ಯೆ ಸಹ ವಿಸ್ತಾರವಾಗುತ್ತ ನಡೆದಿದೆ.

ಇದರ ಜತೆಯಲ್ಲೇ ಒಂದು ಗುಜರಾತೀ ನೀತಿ ಪದ್ಯ ನನ್ನ ಹೃದಯದಲ್ಲಿ ಅಂಕಿತವಾಗಿದ್ದಿತು. ಅಪಕಾರಕ್ಕೆ ಪ್ರತಿಯಾಗಿ ಮಾಡುವುದು ಅಪಕಾರವನ್ನಲ್ಲ, ಉಪಕಾರವನ್ನು ಎಂಬುದು ಅದು. ಈ ತತ್ವ ನನ್ನ ಮೇಲೆ ತನ್ನ ಪ್ರಭಾವ ಬೀರಿತು. ಅಪಕಾರಕ್ಕೆ ಪ್ರತಿಯಾಗಿ ಉಪಕಾರ ಮಾಡುವುದು ನನ್ನ ಮನವೊಪ್ಪಿದ ವಿಷಯವಾಯ್ತು. ನಾನು ಈ ತತ್ವದ ಅಸಂಖ್ಯಾತ ಪ್ರಯೋಗಗಳನ್ನು ಮಾಡಿದೆ. ಆ ಅದ್ಭುತ ಗುಜರಾತೀ ಪದ್ಯಾರ್ಥ ಹೀಗಿದೆ :

"ಒಂದು ಲೋಟ ನೀರು ಕೊಟ್ಟವರಿಗೆ ಊಟವಿಕ್ಕು. ಒಳ್ಳೆಯ ಮಾತನಾಡಿದವರಿಗೆ ದಂಡವತ್ ಪ್ರಣಾಮ ಮಾಡು. ಒಂದು ಕಾಸು ಕೊಟ್ಟವರಿಗೆ ಚಿನ್ನದ ಮೊಹರು ಕೊಡು. ನಿನ್ನ ಪ್ರಾಣ ಉಳಿಸಿದವರಿಗೆ ನಿನ್ನ ಜೀವವನ್ನೇ ಕೊಡಲು ಸಿದ್ಧನಾಗು. ಉಪಕಾರಕ್ಕೆ ಪ್ರತಿಯಾಗಿ ಮನೋವಾಕ್ಕಾಯಗಳಿಂದ ಹತ್ತು ಪಟ್ಟು ಪ್ರತ್ಯುಪಕಾರ ಮಾಡು. ಆದರೆ ನಿಜವಾದ ಜ್ಞಾನಿಗಳು ಒಂದೇ ಸಮನಾಗಿ ನೋಡುತ್ತಾರೆ. ಅಪಕಾರ ಮಾಡಿದವರಿಗೂ ಸಂತೋಷದಿಂದ ಉಪಕಾರ ಮಾಡುತ್ತಾರೆ."

ಮೊದಲ ಸಲ ಇಂಗ್ಲೆಂಡಿಗೆ ಹೋದಾಗ ಗಾಂಧೀಜಿಯವರು ಲಂಡನ್ ನಗರದಲ್ಲಿ ಅಗ್ಗವಾದ ಶಾಕಾಹಾರೀ ಫಲಾಹಾರ ಮಂದಿರಗಳನ್ನು ಹುಡುಕಿಕೊಂಡು ಹೊರಟಿದ್ದಾಗ ಫ್ಯಾರಿಂಗ್ಡನ್‌ನಲ್ಲಿ ಒಂದು ಶಾಕಾಹರ ಗೃಹ ಅವರ ಕಣ್ಣಿಗೆ ಬಿದ್ದಿತು. ತನಗೆ ಬೇಕಾದ ವಸ್ತು ಸಿಕ್ಕಿದಾಗ ಮಗುವಿಗೆ ಆಗುವ ಆನಂದ ಆ ಸ್ಥಳವನ್ನು ನೋಡಿ ಅವರಿಗೆ ಉಂಟಾಯಿತಂತೆ. ಅಲ್ಲಿ ಬಾಗಿಲ ಬಳಿಯ ಕನ್ನಡಿ ಕಿಟಕಿಯಲ್ಲಿ ಮಾರಾಟಕ್ಕಾಗಿ ಇರಿಸಿದ್ದ ಕೆಲವು ಪುಸ್ತಕಗಳಲ್ಲಿ ಸಾಲ್ಟ್‌ರವರು ಬರೆದ 'ಶಾಕಾಹಾರ ಒಂದು ವಿನಂತಿ' ಎಂಬ ಪುಸ್ತಕ ಕಣ್ಣಿಗೆ ಬಿತ್ತು. "ಆ ಪುಸ್ತಕವನ್ನು ಕೊಂಡುಕೊಂಡು ಮೊದಲಿನಿಂದ ಕೊನೆಯವರೆಗೆ ಓದಿದೆ. ಅದು ನನ್ನ ಮನಸ್ಸಿಗೆ ತುಂಬ ಹಿಡಿಸಿತು. ಆ ಪುಸ್ತಕ ಓದಿದಂದಿನಿಂದಲೇ ನಾನು ಮನಃಪೂರ್ವಕವಾಗಿ ಸ್ವಂತ ಇಚ್ಛೆಯಿಂದ ಶಾಖಾಹಾರಿಯಾದೆನೆಂದು ಹೇಳಬಹುದು. ತಾಯಿಯ ಮುಂದೆ ಪ್ರತಿಜ್ಞೆ ಕೊಟ್ಟ ದಿನವನ್ನು ಹರಸಿದೆ. ಅಂದಿನಿಂದ ಶಾಕಾಹಾರಕ್ಕಾಗಿ ಪ್ರಚಾರ ಮಾಡುವುದೇ ಜೀವನದ ಉದ್ದೇಶವಾಯ್ತು" ಎಂದಿದ್ದಾರೆ.

ಸಾಲ್ಟ್‌ರವರ ಗ್ರಂಥ ವ್ಯಾಸಂಗದಿಂದ ಆಹಾರದ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಅಭ್ಯಸಿಸಲು ಗಾಂಧೀಜಿಯವರಿಗೆ ಉತ್ಕಟ ಇಚ್ಛೆಯುಂಟಾಯ್ತು. ಶಾಕಾಹಾರದ ಮೇಲೆ ದೊರೆತ ಎಲ್ಲ ಗ್ರಂಥಗಳನ್ನೂ ಕೊಂಡು ಅವರು ವ್ಯಾಸಂಗ ಮಾಡಿದರು. ಅವುಗಳ ಪೈಕಿ ಒಂದಾದ ಹವರ್ಡ್ ವಿಲಯಮ್ಸ್‌ರ 'ಆಹಾರ ನೀತಿ' ಎಂಬ ಪುಸ್ತಕ, ಪ್ರಾಚೀನ ಕಾಲದಿಂದ ಅಂದಿನವರೆಗಿನ ಮಾನವನ ಆಹಾರದ ಇತಿಹಾಸವೇ ಆಗಿದ್ದಿತು. ಪೈಥಾಗೊರಸ್‌ನಿಂದ ಏಸುಕ್ರಿಸ್ತನವರೆಗೆ ಎಲ್ಲ ದಾರ್ಶನಿಕರೂ ದ್ರಷ್ಟಾರರೂ

ಶಾಕಾಹಾರಿಗಳೇ ಆಗಿದ್ದರೆಂದು ಸ್ಥಾಪಿಸಲು ಆ ಗ್ರಂಥದಲ್ಲಿ ಪ್ರಯತ್ನಪಿದ್ದಿತು. ಡಾ. ಅನಾ ಕೆಂಗ್ಸ್‌ಫರ್ಡ್ ಎಂಬಾಕೆ ಬರೆದಿದ್ದ 'ಆಹಾರ ನೈರ್ಮಲ್ಯ' ಎಂಬ ಗ್ರಂಥಗಳೂ ಗಾಂಧೀಜಿಯವರ ಆಹಾರ ನೀತಿಗೆ ಸಹಾಯಕವಾದುವು. "ಈ ಗ್ರಂಥಗಳ ವ್ಯಾಸಂಗದಿಂದ ಆಹಾರದ ವಿಷಯದಲ್ಲಿ ಪ್ರಯೋಗಗಳನ್ನು ನಡೆಸುವುದಕ್ಕೆ ನನ್ನ ಜೀವನದಲ್ಲಿ ಒಂದು ಪ್ರಮುಖ ಅವಕಾಶವುಂಟಾಯ್ತು. ಆರೋಗ್ಯವನ್ನು ರಕ್ಷಿಸಿಕೊಳ್ಳುವುದೇ ಪ್ರಾರಂಭದಲ್ಲಿ ಈ ಪ್ರಯೋಗಗಳ ಮುಖ್ಯ ಗುರಿಯಾಗಿತ್ತು. ಆದರೆ ಅನಂತರದಲ್ಲಿ ಧಾರ್ಮಿಕ ಸೃಷ್ಟಿಯೇ ಸರ್ವ ಪ್ರಧಾನವಾಯಿತು" ಎಂದಿದ್ದಾರೆ.

ಇಂಗ್ಲೆಂಡಿಗೆ ಹೋದ ಎರಡನೆಯ ವರುಷದ ಕೊನೆಯಲ್ಲಿ ಗಾಂಧೀಜಿಯವರಿಗೆ ಇಬ್ಬರು ಥಿಯಾಸಫಿಸ್ಟರ ಪರಿಚಯವಾಯ್ತು. ಅವರು ಸರ್ ಎಡ್ವಿನ್ ಅರ್ನಾಲ್ಡ್‌ರ ಭಗವದ್ಗೀತೆಯ ಅನುವಾದ (Song celeship) ವನ್ನು ಓದುತ್ತಿದ್ದರು. ಗಾಂಧಿಯವರನ್ನೂ ತಮ್ಮೊಂದಿಗೆ ಭಗವದ್ಗೀತೆಯ ಮೂಲವನ್ನು ವ್ಯಾಸಂಗ ಮಾಡಲು ಅವರು ಆಹ್ವಾನಿಸಿದರು. ಆಗ ಗಾಂಧೀಜಿಯವರ ಭಗವದ್ಗೀತೆಯನ್ನು ಸಂಸ್ಕೃತದಲ್ಲಾಗಲಿ, ಗುಜರಾತಿಯಲ್ಲಾಗಲಿ ಓದರಲಿಲ್ಲ. ಅವರಿಗೆ ನಾಚಿಕೆಯಾಯಿತು. ಆದರೂ ಗೀತೆಯನ್ನು ಅವರ ಜೊತೆಯಲ್ಲಿ ಓದಲು ಪ್ರಾರಂಭಿಸಿದರು. ಎರಡನೆಯ ಅಧ್ಯಾದಲ್ಲಿರುವ–

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷಣಪಜಾಯತೇ
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಭಿಜಾಯತೇ
ಕ್ರೋಧಾದ್ಭವತಿ ಸಂಮೋಹಃ ಸಮ್ಮೋಹಾತ್ ಸ್ಮೃತಿ ವಿಭ್ರಮಃ
ಸ್ಮೃತಿಭ್ರಂಗಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಕಶ್ಯತಿ ॥

ಎಂಬೀ ಶ್ಲೋಕ ಅವರ ಹೃದಯವನ್ನು ಮುಟ್ಟಿತು. ಮನುಷ್ಯ ವಿಷಯಗಳ ಚಿಂತನೆ ಮಾಡುತ್ತಿದ್ದರೆ ಅವುಗಳಲ್ಲಿ ಅವನಿಗೆ ಆಸಕ್ತಿ ಹುಟ್ಟುತ್ತದೆ. ಆಸಕ್ತಿಯಿಂದ ಕಾಮ, ಕಾಮದಿಂದ ಕ್ರೋಧ, ಕ್ರೋಧದಿಂದ ಸಂಮೋಹ ಅಥವಾ ವಿವೇಕರಾದಿತ್ಯ ಉಂಟಾಗುತ್ತವೆ. ಸಂಮೋಹದಿಂದ ಸ್ಮೃತಿಭ್ರಮಣೆ, ಸ್ಮೃತಿಭ್ರಮಣೆಯಿಂದ ಬುದ್ಧಿ ನಾಶ. ಬುದ್ಧಿ ನಷ್ಟವಾದ ಮೇಲೆ ಮನುಷ್ಯ ಪೂರ್ತಿ ನಾಶವಾದಂತೆಯೇ. ಗೀತೆಯ ಎರಡನೆಯ ಅಧ್ಯಾಯದ ಇಂತಹ ಶ್ಲೋಕಗಳು ಗಾಂಧಿಯವರ ಕಿವಿಯಲ್ಲಿ ಸದಾ ಧ್ವನಿಸತೊಡಗಿದವು. ಭಗವದ್ಗೀತೆ ಅಮೂಲ್ಯ ಗ್ರಂಥವೆಂದು ಗಾಂಧಿಯವರಿಗೆ ತೋರಿದ್ದು ಆಗಲೇ. ಆ ಭಾವನೆ ಅವರ ಮನಸ್ಸಿನಲ್ಲಿ ಒಂದೇ ಸಮನೆ ಬೆಳೆಯುತ್ತಲೇ ಇತ್ತು. ಸತ್ಯದ ಜ್ಞಾನ ಸಂಪಾದನೆಗೆ ಈ ಗ್ರಂಥ ಸರ್ವೋತ್ಕೃಷ್ಟವಾದುದೆಂದು ಅವರು ಹೇಳುತ್ತಿದ್ದರು. "ನನ್ನ ನಿರಾಶೆಯ ಸಂದರ್ಭಗಳಲ್ಲೆಲ್ಲ ಈ ಗ್ರಂಥ ನನಗೆ ಅಮೂಲ್ಯವಾದ ಸಹಾಯ ಮಾಡಿದೆ. ಭಗವದ್ಗೀತೆಯ ಎಲ್ಲ ಇಂಗ್ಲಿಷ್ ಅನುವಾದಗಳನ್ನೂ ನಾನು ಓದಿದ್ದೇನೆ. ಸರ್ ಎಡ್ವಿನ್ ಅರ್ನಾಲ್ಡ್‌ರ ಅನುವಾದ ಅತ್ಯುತ್ತಮವಾದುದೆಂದು ನನ್ನ ಅಭಿಪ್ರಾಯ. ಆ ಸ್ನೇಹಿತರ ಜತೆಯಲ್ಲಿ ನಾನು ಆಗ ಭಗವದ್ಗೀತೆಯನ್ನು ಓದಿದರೂ ಆಗ ಅದನ್ನು ಅಧ್ಯಯನ ಮಾಡಿದೆನೆಂದು ಹೇಳಲಾರೆ. ಅದಾದ ಅನೇಕ ವರುಷಗಳ ನಂತರವೇ ಅದು ನನಗೆ ನಿತ್ಯದ ಅಧ್ಯಯನ ಗ್ರಂಥವಾದುದು" ಎಂದಿದ್ದಾರೆ.

ಬಳಿಕ ಆ ಥಿಯೊಸಫಿಸ್ಟ್ ಸಹೋದರರ ಪ್ರೇರಣೆಯಿಂದ ಎಡ್ವಿನ್ ಅರ್ನಾಲ್ಡ್‌ರ ಲೈಫ್ ಆಫ್ ಏಷಿಯ, ಬುದ್ಧಚರಿತ್ರೆ ಗ್ರಂಥವನ್ನೂ ಭಗವದ್ಗೀತೆಯನ್ನು ಓದಿದ್ದಕ್ಕಿಂತ ಹೆಚ್ಚು ಉತ್ಸಾಹದಿಂದ ಓದಿದುದಾಗಿ ಹೇಳಿದ್ದಾರೆ. ಓದುವುದಕ್ಕೆ ಪ್ರಾರಂಭಿಸಿದ ಮೇಲೆ ಅದನ್ನು ಬಿಡುವುದಕ್ಕೆ ಮನಸ್ಸು ಬರಲಿಲ್ಲ ಎಂದಿದ್ದಾರೆ.

ಆ ಥಿಯೊಸಫಿಸ್ಟ್ ಮಿತ್ರರು ಒಂದು ಸಲ ಬ್ಲಾವಟ್ಸ್ಕಿ ಲಾಡ್ಜ್‌ಗೆ ಗಾಂಧಿಯವರನ್ನು ಕರೆದೊಯ್ದಾಗ ಅಲ್ಲಿ ಅವರಿಗೆ ಶ್ರೀಮತಿ ಬ್ಲಾವಟ್ಸ್ಕಿ ಮತ್ತು ಶ್ರೀಮತಿ ಆನಿ ಬೆಸಲ್‌ರ ಪರಿಚಯವಾಯಿತು. ಆ ಸಮಯದಲ್ಲಿ ಮಾದಾಬ್ಲಾವಟ್ಸ್ಕಯವರ "ಥಿಯೊಸಫಿಯ ಕೀಲಿಕೈ" (Key to theosophy) ಎಂಬ ಗ್ರಂಥವನ್ನೂ ಓದಿದರು. ಆ ಪುಸ್ತಕ ಹಿಂದೂ ಧರ್ಮವನ್ನು ಅಭ್ಯಸಿಸುವ ಆಸೆಯನ್ನು ಅವರಲ್ಲಿ ಕುದುರಿಸಿತು. ಹಿಂದೂ ಧರ್ಮ ಬರಿ ಮೂಢನಂಬಿಕೆಗಳ ತವರು ಎಂಬುದಾಗಿ ಕ್ರಿಸ್ತಪಾದ್ರಿಗಳು ಪ್ರಚಾರ ಮಾಡಿದ್ದ ಭಾವನೆ ಅದನ್ನು ಓದಿ ತನ್ನ ಮನಸ್ಸಿನಿಂದ ದೂರವಾಯ್ತು" ಎಂದು ಹೇಳಿದ್ದಾರೆ.

ಇದೇ ಕಾಲದಲ್ಲಿ ಒಂದು ಶಾಕಾಹಾರೀ ಭೋಜನ ಮಂದಿರದಲ್ಲಿ ಮ್ಯಾಂಚೆಸ್ಟರಿನ ಒಬ್ಬ ಉತ್ತಮ ಕ್ರೈಸ್ತನ ಪರಿಚಯ ಗಾಂಧಿಯವರಿಗಾಯ್ತು. "ಮಾಂಸಾಹಾರ ಮತ್ತು ಮದ್ಯಪಾನಗಳನ್ನು ಬೈಬಲ್ ವಿಧಿಸುವುದಿಲ್ಲ. ದಯವಿಟ್ಟು ಬೈಬಲ್ ಓದಿ" ಎಂದು ಹೇಳಿ ಒಂದು ಬೈಬಲ್ ಪ್ರತಿಯನ್ನು ಆತ ಗಾಂಧಿಯವರಿಗೆ ಕೊಟ್ಟನಂತೆ. ಆಗ ಬೈಬಲ್ ವ್ಯಾಸಂಗವನ್ನು ಅವರು ಆರಂಭಿಸಿ ಓಲ್ಡ್‌ಟೆಸ್ಟ್‌ಮೆಂಟ್ ಕಥೆಯನ್ನು ಪೂರ್ತಿಯಾಗಿ ಓದಲಾಗದೆ  ಅಲ್ಲಿಯ 'ಸೃಷ್ಟಿಕ್ರಮ'ದ ಭಾಗವನ್ನಷ್ಟು ಓದಿದುದಾಗಿ ಹೇಳಿದ್ದಾರೆ. ಆದರೆ "ಹೊಸ ಒಡಂಬಡಿಕೆ" (New Testament) ಮಾತ್ರ ಅವರ ಮೇಲೆ ಅಗಾಧ ಪರಿಣಾಮವುಂಟು ಮಾಡಿತು. ಅದರಲ್ಲೂ "ಬೆಟ್ಟದ ಮೇಲಿನ ಪ್ರವಚನ" (Sermon on the mount) ನೇರವಾಗಿ ಅವರ ಹೃದಯವನ್ನೇ ಮುಟ್ಟಿತು. ಅದನ್ನು ಅವರು ಭಗವದ್ಗೀತೆಯ ಶ್ಲೋಕಗಳೊಂದಿಗೆ ಹೋಲಿಸಿ ಅರ್ಥ ಮಾಡಿಕೊಂಡರು. "ಕೆಡುಕಿಗೆ ಪ್ರತಿಯಾಗಿ ಕೆಡಕು ಮಾಡಬೇಡಿ. ನಿಮ್ಮ ಬಲಗೆನ್ನೆಗೆ ಯಾರಾದರೂ ಹೊಡೆದರೆ ಎಡಗೆನ್ನೆಯನ್ನೂ ತೋರಿಸಿ, ನಿಮ್ಮ ಅಂಗಿಯನ್ನು ಯಾರಾದರೂ ಕಿತ್ತುಕೊಂಡರೆ ಅವನಿಗೆ ನಿಮ್ಮ ನಿಲುವಂಗಿಯನ್ನೂ ಕೊಡಿ" ಈ ಮಾತುಗಳು ಗಾಂಧಿಯವರಿಗೆ ಅಮಿತ ಆನಂದವುಂಟು ಮಾಡಿದವಲ್ಲದೆ "ಒಂದು ಬಟ್ಟಲು ನೀರು ಕೊಟ್ಟವರಿಗೆ ಊಟವಿಕ್ಕು" ಎಂಬ ಗುಜರಾತೀ ಕವನದ ಪಂಕ್ತಿಗಳನ್ನು ನೆನಪಿಗೆ ತಂದವಂತೆ. "ನನ್ನ ಎಳೆ ಮನಸ್ಸು ಭಗವದ್ಗೀತೆ, ಬುದ್ಧಚರಿತೆ, ಬೆಟ್ಟದ ಮೇಲಿನ ಪ್ರವಚನ ಇವೆಲ್ಲವುಗಳ ಬೋಧನೆಗಳಲ್ಲಿ ಏಕಭಾವವನ್ನು ಕಾಣಲು ಪ್ರಯತ್ನಿಸಿತು ಮತ್ತು ತ್ಯಾಗವೇ ಅತ್ಯುತ್ತಮ ಧರ್ಮವೆಂಬುದು ಅವರ ಮನಸ್ಸಿಗೆ ಹಿಡಿಸಿತು ಎಂದಿದ್ದಾರೆ ಗಾಂಧೀಜಿ.

ಈ ವ್ಯಾಸಂಗದಿಂದ ಇತರ ಧರ್ಮ ಪ್ರವರ್ತಕರ ಕೃತಿಗಳನ್ನು ಓದುವ ಆಸೆ ಗಾಂಧೀಜಿಯವರಿಗೆ ತೀವ್ರವಾಯ್ತು, ಆಗ ಒಬ್ಬ ಮಿತ್ರರಿಂದ ಕಾರ್ಲೈಲನ "ವಿಭೂತಿ ಪುರುಷರು ಮತ್ತು ಅವರ ಪೂಜೆ" "Heroes & Hero worship" ಎಂಬ ಗ್ರಂಥವನ್ನು

ಓದಬೇಕೆಂಬ ಸಲಹೆ ಬಂದಿತು. ಅದರಲ್ಲಿ ಮುಹಮ್ಮದ್ ಪೈಗಂಬರರ ವಿಷಯವನ್ನು ಓದಿ ಅವರ ಮಹಿಮೆ, ಧೀರತನ, ತಪಸ್ಸು ಇವೆಲ್ಲವುಗಳ ಪರಿಚಯ ಮಾಡಿಕೊಂಡರು. ಆಗ ಇನ್ನೂ ಹೆಚ್ಚು ಧಾರ್ಮಿಕ ಗ್ರಂಥಗಳನ್ನು ಓದಬೇಕು, ಜಗತ್ತಿನ ಎಲ್ಲ ಮುಖ್ಯ ಮತಗಳ ಪರಿಚಯ ಮಾಡಿಕೊಳ್ಳಬೇಕು ಎಂಬುದಾಗಿ ದೃಢ ನಿಶ್ಚಯ ಮಾಡಿಕೊಂಡರು.

ಇದರ ಜೊತೆಯಲ್ಲಿ ನಾಸ್ತಿಕತೆಯ ಪರಿಚಯವೂ ಕೆಲವು ಗ್ರಂಥಗಳಿಂದಾದುದಾಗಿ ಗಾಂಧೀಜಿ ಹೇಳಿದ್ದಾರೆ. ಬ್ರಾಡ್ಲಾರವರ ನಾಸ್ತಿಕವಾದವನ್ನು ಕುರಿತ ಕೆಲವು ಪುಸ್ತಕಗಳನ್ನು ತಾವು ಓದಿದ್ದಾಗಿಯೂ ಅವುಗಳಿಂದ ತಮ್ಮ ಮೇಲೆ ಏನೂ ಪರಿಣಾಮವಾಗಲಿಲ್ಲವೆಂದೂ ತಿಳಿಸಿದ್ದಾರೆ. ಏಕೆಂದರೆ "ನಾನು ಆಗಲೇ ನಾಸ್ತಿಕವಾದದ ಮರಳುಗಾಡನ್ನು ದಾಟಿದ್ದೆ" ಎಂದಿದ್ದಾರೆ. ನಾಸ್ತಿಕವಾದದಿಂದ ಆಸ್ತಿತಕವಾದಕ್ಕೆ ಪರಿವರ್ತಿತಳಾಗಿದ್ದ ಶ್ರೀಮತಿ ಬೆಸೆಂಟರ "ನಾನು ಥಿಯಾಸಫಿಸ್ಟ್ ಆದುದು ಹೇಗೆ ?" ಎಂಬ ಪುಸ್ತಕವನ್ನೋದಿ ನಾಸ್ತಿಕವಾದದ ಬಗ್ಗೆ ಗಾಂಧೀಜಿಯವರ ಔದಾಸೀನ್ಯ ಇನ್ನೂ ಹೆಚ್ಚಾಗಿತ್ತೆಂದು ಉದ್ಗರಿಸಿದ್ದಾರೆ.

ಮೂವರು ಅರ್ವಾಚೀನ ಮಹನೀಯರು ತಮ್ಮ ಜೀವನದ ಮೇಲೆ ಆಳವಾದ ಪ್ರಭಾವವನ್ನುಂಟು ಮಾಡಿ ತಮ್ಮನ್ನು ಆಕರ್ಷಿಸಿರುವರೆಂದು ಗಾಂಧೀಜಿ ಹೇಳಿದ್ದಾರೆ. ಅವರೆಂದರೆ ಜೀವನ ಸಂಸರ್ಗದಿಂದ ಶತವಾಧಾನಿಯೂ ಜ್ಞಾನಿಯೂ ಎನಿಸಿದ್ದ ರಾಯಚಂದಭಾಯಿ "ದೇವರ ಸಾಮ್ರಾಜ್ಯ ನಿಮ್ಮ ಹೃದಯದಲ್ಲಿದೆ Kingdom of God is Within you ಎಂಬ ಪುಸ್ತಕದಿಂದ ಟಾಲ್‌ಸ್ಟಾಯ್, ಸರ್ವೋದಯ 'Unto the Last' ಎಂಬ ಪುಸ್ತಕದಿಂದ ರಸ್ಕಿನ್ ಇವರೇ ಆ ಮೂವರು ಎಂದು ಉದ್ಗರಿಸಿದ್ದಾರೆ.

ಗಾಂಧೀಜಿ ದಕ್ಷಿಣ ಆಫ್ರಿಕೆಯಲ್ಲಿದ್ದಾಗ 'ಕೊರಾನಿ'ಗೆ ಸೇಲ್ ಎಂಬವರು ಬರೆದಿದ್ದ ಭಾಷಾಂತರವನ್ನು ಓದಿದರಲ್ಲದೆ ಇಸ್ಲಾಂ ಧರ್ಮದ ಮೇಲಿನ ಇವರ ಅನೇಕ ಗ್ರಂಥಗಳನ್ನು ಓದಿದರು. ಇಂಗ್ಲಂಡಿನಲ್ಲಿದ್ದ ಕ್ರೈಸ್ತ ಮಿತ್ರ ಮೇಟ್ಲಾಂಡರು ತಾವೂ ಅನಾಕಿಂಗ್ಸ್‌ಫರ್ಡರೂ ಸೇರಿ ಬರೆದಿದ್ದ The Perfect way "ಉತ್ತಮೋತ್ತಮ ಮಾರ್ಗ" ಎಂಬ ಪುಸ್ತಕವನ್ನು ಗಾಂಧೀಜಿಯವರಿಗೆ ಓದಲು ಕಳಿಸಿದರು. ಅದರೊಂದಿಗೆ ಬೈಬಲ್ಲಿನ ಹೊಸ ಅರ್ಥ ಎಂಬ ಪುಸ್ತಕವನ್ನೂ ಕಳಿಸಿದ್ದರು. ಅವು ಹಿಂದೂ ಧರ್ಮವನ್ನು ಸಮರ್ಥಿಸುವಂತೆ ತೋರಿದವು. ಅವನ್ನು ತಾವು ಮೆಚ್ಚಿದುದಾಗಿ ತಿಳಿಸಿದ್ದಾರೆ. ಇದೇ ಸಮಯದಲ್ಲಿ ಓದಿದ ಟಾಲ್‌ಸ್ಟಾಯ್ ಅವರ "The Kingdom of God is Within You" ಎಂಬ ಗ್ರಂಥವಂತೂ ತಮ್ಮನ್ನು ಮುಗ್ಧಗೊಳಿಸಿತೆಂದು ಉದ್ಗರಿಸಿದ್ದಾರೆ. "ಅದು ನನ್ನ ಮನಸ್ಸಿನಲ್ಲಿ ಶಾಶ್ವತ ಪರಿಣಾಮ ಬೀರಿತು. ಈ ಗ್ರಂಥದ ಸ್ವತಂತ್ರ ವಿಚಾರ, ಶೈಲಿ, ಪ್ರೌಢನೀತಿ, ಸತ್ಯ ಪ್ರತಿಪಾದನೆ ಇವುಗಳ ಎದುರಿನಲ್ಲಿ ಅಲ್ಲಿಯ ಇತರ ಕ್ರೈಸ್ತ ಮಿತ್ರರು ಕೊಟ್ಟ ಪುಸ್ತಕಗಳೆಲ್ಲ ಶುಷ್ಕವೆನಿಸಿದವು ಎಂದಿದ್ದಾರೆ.

ಇದೇ ಸಮಯದಲ್ಲಿ ಭಾರತದಿಂದ ಮಿತ್ರರೊಬ್ಬರು ಕಳಿಸಿದ್ದ ನರ್ಮದಾ ಶಂಕರರ 'ಧರ್ಮವಿಚಾರ' ಗ್ರಂಥವ್ಯಾಸಂಗದಿಂದ ಹಿಂದೂ ಧರ್ಮದ ತಿಳಿವಳಿಕೆಗೆ ತುಂಬ ಪ್ರಯೋಜನವಾಯಿತು ಗಾಂಧೀಜೀಯವರಿಗೆ, ಹಾಗೆಯೆ, ಮ್ಯಾಕ್ಸ್ ಮುಲ್ಲರ್ ಬರೆದ

"ಭಾರತ, ಅದು ನಮಗೆ ಏನನ್ನು ಕಲಿಸಬಲ್ಲದು ?" ಎಂಬ ಗ್ರಂಥವನ್ನೂ ಥಿಯಾಸೊಫಿಕಲ್ ಸೊಸಾಯಿಟಿಯವರು ಪ್ರಕಟಿಸಿದ್ದ ಉಪನಿಷತ್ತುಗಳ ಭಾಷಾಂತರವನ್ನೂ ಶ್ರದ್ಧೆಯಿಂದ ಗಾಂಧೀಜಿ ವ್ಯಾಸಂಗ ಮಾಡಿದರು. ಇದರಿಂದ ಹಿಂದೂ ಧರ್ಮದ ಬಗ್ಗೆ ಅವರ ಆದರ ಹೆಚ್ಚಿತು. ಅದರ ಸೊಗಸು-ಸೌಂದರ್ಯಗಳು ಅವರ ಮನಸ್ಸನ್ನು ತುಂಬಿದವು. ಆದರೆ ಇದರಿಂದ ಇತರ ಧರ್ಮಗಳಲ್ಲಿ ಅವರಿಗೆ ಅನಾದರ ಉಂಟಾಗಲಿಲ್ಲ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ ಗಾಂಧೀಜಿ. ವಾಸಿಂಗ್ಟನ್ ಇರ್ವಿಂಗ್ ಬರೆದ "ಮುಹಮ್ಮದ್ ಮತ್ತು ಆತನ ಉತ್ತರಾಧಿಕಾರಿಗಳು" ಎಂಬ ಪುಸ್ತಕವನ್ನೂ ಕಾರ್ಲೈಲ್ ಬರೆದ ಮೊಹಮ್ಮದನ ಗುಣಗಾನವನ್ನೂ ಓದಿ ಅವರಲ್ಲಿ ಪೈಗಂಬರರ ಬಗ್ಗೆ ಗೌರವ ಹೆಚ್ಚಿತು. "ಜೊರುತುಷ್ಟ ವಚನಗಳು" ಎಂಬ ಪುಸ್ತಕವನ್ನೂ ಓದಿ ಪಾರಸಿ ಧರ್ಮದ ಜ್ಞಾನವನ್ನು ಪಡೆದುಕೊಂಡರು.

ಹೀಗೆ ಭಿನ್ನ ಭಿನ್ನ ಧರ್ಮಗಳ ಜ್ಞಾನವನ್ನು ಹೆಚ್ಚಿಸಿಕೊಂಡು ತಮ್ಮಲ್ಲಿ ಆತ್ಮನಿರೀಕ್ಷಕ ಬುದ್ಧಿಯನ್ನು ತೀಕ್ಷ್ಣಗೊಳಿಸಿಕೊಂಡರು. ಅಲ್ಲದೆ ಈ ಎಲ್ಲ ವ್ಯಾಸಂಗದಿಂದ ಯಾವ ಯಾವ ವಿಷಯಗಳಲ್ಲಿ ಅವರಿಗೆ ಮೆಚ್ಚುಗೆಯುಂಟಾಯಿತೋ ಅವುಗಳನ್ನೆಲ್ಲ ಆಚರಿಸುವ ಅಭ್ಯಾಸವನ್ನೂ ಅವರು ಬೆಳೆಸಿಕೊಂಡರು. ಹೀಗೆಯೇ ಹಿಂದೂ ಯೋಗಶಾಸ್ತ್ರವನ್ನು ಅಭ್ಯಸಿಸಿ ಯೋಗಸಾಧನೆಯನ್ನೂ ಆರಂಭಿಸಿದರು. ಆದರೆ ಈ ಸಾಧನೆಯಲ್ಲಿ ತಾವು ಬಹು ದೂರ ಮುಂದುವರಿಯಲಾಗಲಿಲ್ಲವೆಂದು ವಿಷಾದಿಸಿದ್ದಾರೆ.

ಟಾಲ್‌ಸ್ಟಾಯ್ ಅವರ ಇನ್ನೆರಡು ಪುಸ್ತಕಗಳಾದ "ಏಸುವಿನ ಬೋಧನೆಯ ಸಾರ" ಮತ್ತು "ಮಾಡತಕ್ಕದ್ದೇನು ?" ಎಂಬ ಗ್ರಂಥಗಳು ತಮ್ಮ ಮೇಲೆ ಗಾಢ ಪರಿಣಾಮವುಂಟು ಮಾಡಿದುದಾಗಿ ತಿಳಿಸಿದ್ದಾರೆ. ವಿಶ್ವಪ್ರೇಮದ ಅಮಿತ ಶಕ್ತಿಯ ಸಾಧ್ಯತೆ ಇವುಗಳಿಂದ ಹೆಚ್ಚು ಹೆಚ್ಚಾಗಿ ಗೊತ್ತಾಗತೊಡಗಿತು ಎಂದಿದ್ದಾರೆ. ಎಡ್ವಿನ್ ಅರ್ನಾಲ್ಡ್‌ರ 'ಲೈಟ್ ಆಫ್ ಏಷಿಯ' "ಏಷ್ಯಾದ ಜ್ಯೋತಿ" ಗ್ರಂಥವನ್ನು ಮತ್ತೊಂದು ಬಾರಿ ಓದಿ "ಬುದ್ಧನ ದಯೆ ಬರಿಯ ಮನುಷ್ಯ ಮಾತ್ರಕ್ಕೆ ನಿಲ್ಲದೆ ಸಕಲ ಜೀವ ಜಂತುಗಳನ್ನೂ ಆಲಂಗಿಸಿತು" ಎಂದು ಉದ್ಗರಿಸಿದ್ದಾರೆ ಗಾಂಧೀಜಿ.

ದಕ್ಷಿಣ ಆಫ್ರಿಕೆಯಲ್ಲಿ ಒಂದು ಚಿಕ್ಕ ಜಿಜ್ಞಾಸು ಕೂಟವನ್ನು ಸ್ಥಾಪಿಸಿಕೊಂಡು ಸ್ವಾಮೀ ವಿವೇಕಾನಂದರ ರಾಜಯೋಗವನ್ನೂ ಪತಂಜಲಿಯ ಯೋಗ ಸೂತ್ರಗಳನ್ನೂ ಗಾಂಧೀಜಿ ಅಭ್ಯಸಿಸಿದರು. ಅಲ್ಲದೆ ಭಗವದ್ಗೀತೆಯ ಆಳವಾದ ವ್ಯಾಸಂಗ ಆರಂಭವಾದುದು ಇಲ್ಲಿಯೇ. ಪ್ರತಿನಿತ್ಯ ಒಂದು ಅಥವಾ ಎರಡು ಶ್ಲೋಕಗಳನ್ನು ತಪ್ಪದೆ ಬಾಯಿಪಾಠ ಮಾಡುವುದಾಗಿ ನಿಶ್ಚಯಿಸಿಕೊಂಡರು. ಸತ್ಯಾಗ್ರಹ ಜನ್ಮ ತಳೆದಾಗ ಭಗವದ್ಗೀತೆಯೇ ತಮ್ಮ ಬುದ್ಧಿಯನ್ನೆಲ್ಲ ಆಕ್ರಮಿಸಿತ್ತೆಂದು ಹೇಳಿದ್ದಾರೆ. ಗಾಂಧೀಜಿಯವರು ತಮ್ಮ ಮಟ್ಟಿಗೆ ಗೀತೆಯೇ ತಮ್ಮ ಆಚರಣೆಯ ಮಾರ್ಗದರ್ಶಿ, ಒಂದು ಪ್ರೌಢ ಧಾರ್ಮಿಕ ಕೋಶ ಆಯಿತೆಂದಿದ್ದಾರೆ. ತಮ್ಮ ಎಲ್ಲ ಕಷ್ಟಗಳಲ್ಲೂ ಕಠಿಣ ಪರಿಸ್ಥಿತಿಯಲ್ಲೂ ಪರಿಹಾರಕ್ಕಾಗಿ ಗೀತೆಯತ್ತಲೇ ತಿರುಗುತ್ತಿದ್ದುದಾಗಿ ತಿಳಿಸಿದ್ದಾರೆ. ಅಪರಿಗ್ರಹ, ಸಮಭಾವ ಈ ಪದಗಳೂ ಅವುಗಳ ಭಾವಗಳೂ ಮನಸ್ಸಿನಲ್ಲಿ ನಾಟಿದವು ಎನ್ನುತ್ತಾರೆ. ಗೀತೆಯ

ಉಪದೇಶದ ಬೆಳಕಿನಲ್ಲಿ 'ಟ್ರಸ್ಟಿ'–'ಧರ್ಮದರ್ಶಿ' ಎಂಬ ಪದದ ಅರ್ಥ ತಮಗೆ ಇನ್ನೂ ಚೆನ್ನಾಗಿ ಅರ್ಥವಾಯ್ತು ಎಂದಿದ್ದಾರೆ. ಅಪರಿಗ್ರಹಕ್ಕೂ ಸಮಭಾವಕ್ಕೂ ಅವಶ್ಯಕವಾದುದು ಹೃದಯ ಪರಿವರ್ತನೆ ಮತ್ತು ಮನೋಧರ್ಮ ಪರಿವರ್ತನೆ ಎಂಬುದು ಗೀತೆಯ ಆಧಾರದಿಂದ ಹಗಲಿನ ಬೆಳಕಿನಷ್ಟು ಸ್ಪಷ್ಟವಾಯ್ತು ಎಂದಿದ್ದಾರೆ.

ಮೊಟ್ಟಮೊದಲು ರಸ್ಕಿನ್ ಅವರ 'Unto the last" ಪುಸ್ತಕವನ್ನು ಮಿ. ಪೋಲಕ್ ಅವರು ಗಾಂಧೀಜಿಯವರಿಗೆ ಓದಲು ಕೊಟ್ಟಿದ್ದರು". ಆ ಪುಸ್ತಕಗಳನ್ನು ಓದಲಾರಂಭಿಸಿದುದೇ ತಡ ಅದನ್ನು ಕೆಳಗಿಡಲು ಸಾಧ್ಯವಾಗಲಿಲ್ಲ. ಅದು ನಮ್ಮ ಮನಸ್ಸನ್ನು ಸೆರೆಹಿಡಿಯಿತು" ಎಂದಿದ್ದಾರೆ. ಅವರದನ್ನು ಜೊಹಾನ್ಸ್‌ಬರ್ಗ್‌ದಿಂದ ಡರ್ಬಾನಿಗೆ ಹೋಗುವ ರೈಲಿನಲ್ಲಿ ಓದಿ ಮುಗಿಸಿದರು. ಆ ರಾತ್ರಿಯೆಲ್ಲ ನಿದ್ರೆ ಬರಲಿಲ್ಲವಂತೆ. ಆ ಗ್ರಂಥದಲ್ಲಿ ಹೇಳಿದ ಧ್ಯೇಯಗಳಿಗನುಗುಣವಾಗಿ ತಮ್ಮ ಜೀವನವನ್ನು ಬದಲಾಯಿಸಿ ಕೊಳ್ಳಬೇಕೆಂಬ ನಿರ್ಧಾರವನ್ನು ಆಗ ಅವರು ಮಾಡಿದರು. ಈ ಪುಸ್ತಕವನ್ನು 'ಸರ್ವೋದಯ' ಎಂಬ ಹೆಸರಿನಲ್ಲಿ ಗುಜರಾತಿಗೆ ಅನುವಾದಿಸಿ ಪ್ರಕಟ ಮಾಡಿದರು. ಗಾಂಧೀಜಿಯವರ ಕೆಲವು ಆಳವಾದ ನಂಬಿಕೆಗಳು ಈ ಗ್ರಂಥದಲ್ಲಿ ಪ್ರತಿಬಿಂಬಿತವಾಗಿವೆ. ಅಂತೆಯೇ ಅದು ಅವರನ್ನು ಹಾಗೆ ಆಕರ್ಷಿಸಿ ಅವರ ಬಾಳಿನಲ್ಲಿ ಅಂತಹ ಬದಲಾವಣೆಯನ್ನು ಮಾಡಿತು ಎಂದು ಅವರ ನಂಬಿಕೆ. ಮನುಷ್ಯನ ಹೃದಯದಲ್ಲಿ ಅಡಗಿರುವ ಸದ್ಭಾವನೆಗಳನ್ನು ಜಾಗೃತಗೊಳಿಸುವವನೇ ಕವಿ. ಕವಿಗಳು ಎಲ್ಲರ ಮೇಲೂ ಒಂದೇ ವಿಧವಾದ ಪ್ರಭಾವವನ್ನು ಬೀರಲಾರರು. ಏಕೆಂದರೆ ಎಲ್ಲರ ಮನಸ್ಸೂ ಒಂದೇ ವಿಧವಾದ ಪರಿಪಾಕ ಹೊಂದಿರುವುದಿಲ್ಲ. "Unto the Last" ಗ್ರಂಥದ ಸಿದ್ಧಾಂತಗಳನ್ನು ಗಾಂಧೀಜಿಯವರೇ ಹೀಗೆ ತಿಳಿಸಿದ್ದಾರೆ :

೧) ಎಲ್ಲರ ಒಳಿತಿಯದರಲ್ಲೆ ನಮ್ಮ ಒಳ್ಳೆಯದು ಅಡಗಿದೆ.

೨) ವಕೀಲನ ಕೆಲಸಕ್ಕೆ ಕ್ಷೌರಿಕನ ಕೆಲಸಕ್ಕೆ ಇರುವ ಬೆಲೆ ಒಂದೇ. ಏಕೆಂದರೆ ತಮ್ಮ ಕೆಲಸದಿಂದ ಜೀವನವನ್ನು ಸಂಪಾದಿಸುವ ಹಕ್ಕು ಎಲ್ಲರಿಗೂ ಸಮಾನವಾಗಿದೆ.

೩) ಶ್ರಮಜೀವಿಯ ಜೀವನ ಎಂದರೆ  ಉಳುವವನ ಅಥವಾ ಕೈಕಸಬುಗಾರರ ಜೀವನವೇ ಯೋಗ್ಯ ಜೀವನ.

ಈ ಮೂರು ಸಿದ್ಧಾಂತಗಳಲ್ಲಿ ಮೊದಲನೆಯದನ್ನು ಗಾಂಧೀಜಿಯವರು ಮೊದಲೇ ಅರಿತಿದ್ದರು. ಎರನಡೆಯದು ಅಷ್ಟು ಸ್ಪಷ್ಟವಾಗಿ ತಿಳಿದಿರಲಿಲ್ಲ. ಮೂರನೆಯದು ಅವರಿಗೆ ಹೊಳೆದಿರಲೇ ಇಲ್ಲ. ಎರಡನೆಯದು ಮೊದಲನೆಯದಲ್ಲಿ ಅಡಗಿದೆ ಎಂಬುದನ್ನು ಈ ಗ್ರಂಥ ಸ್ಪಷ್ಟವಾಗಿ ಸೂರ್ಯೋದಯದಂತೆ ತೋರಿಸಿಕೊಟ್ಟಿತು. ಪ್ರಾತಃಕಾಲ ಎದ್ದು ಈ ತತ್ವಗಳನ್ನೆಲ್ಲ ಆಚರಣೆಗೆ ತರಲು ಸಿದ್ಧನಾದೆ ಎಂದು ತಿಳಿಸಿದ್ದಾರೆ.

೦

# ೬. ಮಾಸ್ತಿಯವರ ಧಾರವಾಡದ ವಾಸ್ತವ್ಯ

**ಈ** ವಿಷಯವನ್ನು ಕುರಿತು ನಾನು ಮಾಡಿದ ಉಪನ್ಯಾಸದ ಸಾರಸಂಗ್ರಹ ರೂಪವೇ ಈ ಲೇಖನ. ಶ್ರೀಮತಿ ವಸಂತಶ್ರೀಯವರು ಸ್ಥಾಪಿಸಿರುವ "ಮಾಸ್ತಿ ಅಧ್ಯಯನ ಪೀಠ"ದ ಆಶ್ರಯದಲ್ಲಿ ನಾನು ಉಪನ್ಯಾಸವಿತ್ತೆ. ನನ್ನ ಮಿತ್ರ ಡಾ. ಶ್ರೀನಿವಾಸ ಹಾವನೂರರು ಈ ವಿಷಯವನ್ನು ಸೂಚಿಸಿದ್ದರು. ಅವರೇ ಈ ಸಂದರ್ಭದಲ್ಲಿ ಸುಭಾಧ್ಯಕ್ಷತೆ ವಹಿಸಿದ್ದರು.

ನನಗೆ ಪೂಜ್ಯರು, ಪಿತೃಸದೃಶರೂ ಆಗಿದ್ದ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರನ್ನು ನಾನು ಮೊದಲು ಕಂಡುದು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ. ಆಗ ನಾನು ಅಲ್ಲಿ ವಿದ್ಯಾರ್ಥಿಯಾಗಿದ್ದೆ. ೧೯೩೦-೩೨ರ ಸುಮಾರಿಗೆ ಎಂದು ನೆನಪು. ಕಾಲೇಜಿನ ಕರ್ನಾಟಕ ಸಂಘದ ವಾರ್ಷಿಕೋತ್ಸವಕ್ಕೋ ಇನ್ನಾವ ವಿಶೇಷ ಸಮಾರಂಭಕ್ಕೋ ಅವರು ಮುಖ್ಯ ಅತಿಥಿಗಳಾಗಿ ಆಮಂತ್ರಿತರಾಗಿದ್ದರು. ಕಾಲೇಜಿನ ಭವ್ಯ ಗ್ಯಾಲರಿ ಹಾಲ್ ವಿದ್ಯಾರ್ಥಿ-ಪ್ರಾಧ್ಯಾಪಕರಿಂದಲೂ ಧಾರವಾಡದ ಹಲ ಕೆಲವು ಗಣ್ಯ ಸಾಹಿತಿ ವಿದ್ವಜ್ಜನರಿಂದಲೂ ಕಿಕ್ಕಿರಿದು ತುಂಬಿತ್ತು. ಪ್ರೊ. ಆರ್.ವಿ. ಜಹಗಿರದಾರ್ ಅವರು (ಅನಂತರ ಶ್ರೀರಂಗರೆಂದು ಪ್ರಸಿದ್ಧರಾದವರು) ಮಾಸ್ತಿಯವರನ್ನು ಸಭೆಗೆ ಪರಿಚಯಿಸಿದರು: "ಮಾಸ್ತಿಯವರು ಕನ್ನಡದ ಆಸ್ತಿ-ಮಹಾ ಆಸ್ತಿ" ಎಂದು ಉದ್ಗರಿಸಿದಾಗ ಸಭೆಯೆಲ್ಲವೂ ಚಪ್ಪಾಳೆ ತಟ್ಟಿ ಸಂತೋಷ ವ್ಯಕ್ತಪಡಿಸಿತು. ಅಂದು ಮಾಸ್ತಿಯವರು ಕನ್ನಡ ಜನತೆಯ ಸಂಸ್ಕೃತಿಯನ್ನು ಕುರಿತು ಸುಮಾರು ಒಂದು ಗಂಟೆ ಕಾಲ ಉದ್ಬೋಧಕ ಭಾಷಣವಿತ್ತರೆಂದು ನೆನಪು. ಸರಳ ಗಾಂಭೀರ್ಯತೆಯಿಂದ ಅಲ್ಲಲ್ಲಿ ತಮ್ಮದೇ ಆದ ಹಾಸ್ಯ ವೈಖರಿಯಿಂದ ಕೂಡಿದ ಅವರ ಮಾತುಗಾರಿಕೆ ಸಕಲ ಸಭಿಕರ ಹೃದಯವನ್ನು ನಲಿದಾಡಿಸಿತ್ತು. ಇದು ನಡೆದದು ೬೮-೭೦ ವರ್ಷಗಳ ಹಿಂದೆ. ಈ ನೆನಪಿನ ಅಚ್ಚು ನನ್ನ ಮನದಿಂದ ಇಂದಿಗೂ ಅಳಿಸಿಹೋಗಿಲ್ಲ. ಬಹುಶಃ ಆಗ ಅವರು ಸಾಲಿ ರಾಮಚಂದ್ರರಾಯರಲ್ಲೋ ಬೇಂದ್ರೆಯವರಲ್ಲೋ ಉಳಿದಿರಬೇಕು.

ಇಂದಿನ ಕನ್ನಡದ ಹಿರಿಯ ಸಾಹಿತಿಗಳಲ್ಲಿ ಮಾಸ್ತಿಯವರ ಹೆಸರು ಅತ್ಯುನ್ನತ ಮಟ್ಟದ್ದು. ಅವರು ಮುಟ್ಟದ ಸಾಹಿತ್ಯ ಪ್ರಕಾರವಿಲ್ಲ, ಮುಟ್ಟಿದ್ದೆಲ್ಲ ಚಿನ್ನವಾಗದಿಲ್ಲ. ಕವಿತೆ, ಭಕ್ತಿಗೀತೆ, ಕಥನ ಕಾವ್ಯ, ಸಣ್ಣಕತೆ, ನೀಳ್ಗತೆ, ನಾಟಕ, ಗೀತರೂಪಕ, ಚೌಪದಿ ಅಥವಾ ಅಷ್ಟಷಟ್ಪದಿ (Sonnet), ಕಾದಂಬರಿ, ವಿಚಾರ ಪ್ರಬಂಧ, ಸಾಹಿತ್ಯ ವಿಮರ್ಶೆ, ಆತ್ಮವೃತ್ತ, ಜೀವನ ಚರಿತ್ರೆ-ಇತ್ಯಾದಿ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ನೂರಾರು ಕೃತಿಗಳನ್ನು ರಚಿಸಿ ಸಿದ್ಧಹಸ್ತರೆನಿಸಿದವರು ಮಾಸ್ತಿಯವರು. ಹೀಗಿದ್ದರೂ "ಸಣ್ಣಕತೆಯ ಶ್ರೀನಿವಾಸರೆಂದೇ ಮಾಸ್ತಿಯವರನ್ನು ಕನ್ನಡ ಜನ ಹೆಚ್ಚಾಗಿ ಗುರುತಿಸಿಕೊಂಡರು. ಇದಕ್ಕೆ ಮುಖ್ಯ

ಕಾರಣವೆಂದರೆ–ಇಂಗ್ಲಿಷ್ ಭಾಷೆಯಲ್ಲಿ ಪ್ರಚಲಿತವಿದ್ದ ಸಣ್ಣ ಕತೆ (Short story) ಯ ಹೊಸತಂತ್ರವನ್ನು ಕನ್ನಡಕ್ಕೆ ಮೊಟ್ಟ ಮೊದಲು ಪರಿಚಯಿಸಿ, ರೂಢಿಗೆ ತಂದು, ಕನ್ನಡದ ಗಾಡಕ್ಕೆ ಉಜ್ಜಿ ಉತ್ತಮಪಡಿಸಿ ಕನ್ನಡಿಸಿದವರು ಶ್ರೀನಿವಾಸರೇ. ಈ ಕಾರಣದಿಂದಲೇ "ಕನ್ನಡ ಸಣ್ಣಕತೆಯ ಜನಕ"ರೆಂಬ ಮನ್ನಣೆಯ ಬಿರುದು ಇವರದಾಯ್ತು. ಇದರ ಜತೆ ಜತೆಗೆ ಅವರ ಕಾವ್ಯಕಲೆಯೂ ವಿಪುಲ ಹಾಗೂ ವೈವಿಧ್ಯಮಯ. ಬಿನ್ನಹ (೧೯೨೨), ಅರುಣ (೧೯೨೪), ತಾವರೆ (೧೯೩೦), ಚೆಲುವು (೧೯೩೧), ಮಲಾರ (೧೯೩೩), ಸುನೀತ (೧೯೪೬), ಮನವಿ (೧೯೫೧)–ಮುಂತಾದ ಅವರ ಕವನ ಸಂಕಲನಗಳಲ್ಲಿ ಬಿಡಿ ಕವನಗಳೂ ಭಕ್ತಿಗೀತೆಗಳೂ ಇವೆ. ಅವರ ಭಕ್ತಿಗೀತೆಯ ರಚನೆಗಳ ಮೇಲೆ ನಮ್ಮ ದಾಸರ ಪದಗಳ ಪ್ರಭಾವವಿದ್ದರೂ ಅವು ಇಂದಿನ ಕನ್ನಡ ಜನಮನದ ಅಭಿರುಚಿಗೆ ತಕ್ಕ ಹೊಸ ಮಾದರಿಯ ಭಕ್ತಿಗೀತೆಗಳೇ ಆಗಿವೆ. ಉದಾತ್ತ ಕಲ್ಪನೆ, ಭಾವಸ್ಪಂದನ, ಸಹಜ ಭಾಷಾ ಸರಣಿ, ಹೊಸ ವಸ್ತು, ಛಂದೋವೈವಿಧ್ಯ–ಇತ್ಯಾದಿ ಕಾವ್ಯಾಂಶಗಳು ಅವರ ರಚನೆಗಳಲ್ಲಿ ವಿಪುಲ ಹಾಗೂ ತುಂಬ ಆಹ್ಲಾದಕಾರಿ. ಪಾಶ್ಚಾತ್ಯ ಕಾವ್ಯ ಪ್ರಕಾರವಾದ 'ಸಾನೆಟ್' ಮಾಸ್ತಿಯವರ ಕೈಯಲ್ಲಿ ವಿಶಿಷ್ಟ ಕನ್ನಡದ ಹದ ಪಡೆದಿದೆ. ಸ್ಥಳಗಳ ಹೆಸರುಗಳು, ಗೌಡರ ಮಲ್ಲಿ, ರಾಮನವಮಿ, ಮೂಕನ ಮಕ್ಕಳು, ನವರಾತ್ರಿ–ಇವು ಮಾಸ್ತಿಯವರು ಹೊಸದಾಗಿ ಪ್ರಯೋಗಿಸಿದ ಸುಂದರ ಕಥನ ಕವನಗಳು. ಇವರ ಕಾವ್ಯ ಭಾಷಾ ಸರಣಿ ಗದ್ಯಶೈಲಿಗೆ ಹತ್ತಿರವೆನಿಸುವಷ್ಟು ಸಹಜ, ಸರಳ. ಆದರೆ ಕಲ್ಪನಾ ವಿಲಾಸ, ಭಾವಗಾಂಭೀರ್ಯ, ರಸಧ್ವನಿ, ಜೀವನ ದರ್ಶನ ಇವು ಇವರ ರಚನೆಗಳಲ್ಲಿ ಮಿಗಿಲಾದ ಹಂತದವು. ಇವರ "ಶ್ರೀರಾಮ ಪಟ್ಟಾಭಿಷೇಕ"ವು ಸರಳ ರಗಳೆಯಲ್ಲಿ ರಚಿತವಾದ ವಿಶಿಷ್ಟ ಮಾದರಿಯ ಮಹಾಕಾವ್ಯ. ರಾಮಾಯಣದ ಕಾವ್ಯ ಪಾತ್ರಗಳ ಬಾಯಲ್ಲಿಯೇ ಇಲ್ಲಿಯ ಕಥೆಯನ್ನು ಹೇಳಿಸಿದ ರೀತಿ ಕನ್ನಡಕ್ಕೆ ಹೊಸತು.

ಶ್ರೀನಿವಾಸರ "ಚೆನ್ನಬಸವನಾಯಕ" ಮತ್ತು "ಕೊಡಗಿನ ಚಿಕ್ಕವೀರ ರಾಜೇಂದ್ರ" ಇವೆರಡು ಐತಿಹಾಸಿಕ ಕಾದಂಬರಿಗಳು ವಾಸ್ತವ ಕಥನ ಕಲೆಯುಳ್ಳವು. ಸಣ್ಣಕತೆಗಳಲ್ಲೇ ಆಗಲಿ ಕಾದಂಬರಿಗಳಲ್ಲೇ ಆಗಲಿ ಕನ್ನಡ ಜನಮನದ ತಿರುಳನ್ನೂ ಭಾರತೀಯ ಸಂಸ್ಕೃತಿಯ ಸತ್ವಸಾರವನ್ನೂ ಪ್ರತಿಬಿಂಬಿಸಿದ್ದಾರೆ.

ಮಾಸ್ತಿಯವರ ನಾಟಕ ಕೃತಿಗಳಲ್ಲಿ ಸಾವಿತ್ರಿ, ಉಷಾ, ಶಾಂತಾ, ತಾಳಿಕೋಟೆ, ಶಿವಛತ್ರಪತಿ, ಯಶೋಧರಾ, ತಿರುಪಾಣಿ, ಕಾಕನಕೋಟೆ, ಚಿತ್ರಾಂಗದಾ ಮುಂತಾದವು ವಿಶಿಷ್ಟ ಮಾದರಿಯವು. ವಿಚಾರಪರ ಕೃತಿಗಳಲ್ಲಿ ಕನ್ನಡ ಜನತೆಯ ಸಂಸ್ಕೃತಿ, ಸಾಹಿತ್ಯ, ಕನ್ನಡ ಜನಪದ ಸಾಹಿತ್ಯ, ಆದಿಕವಿ ವಾಲ್ಮೀಕಿ, ತಾಯ್ನುಡಿಯ ತಮ್ಮಡಿ, ರವೀಂದ್ರನಾಥ ಠಾಕೂರರು, ಭಾರತ ತೀರ್ಥ, ವಿಮರ್ಶೆ (ಭಾಗ ೧ ರಿಂದ ೪), ಪ್ರಸಂಗ (ಭಾಗ ೧ ರಿಂದ ೩), ಭಾವ (ಭಾಗ ೧ ರಿಂದ ೩) ಇವು ಭಾಷೆ, ಸಾಹಿತ್ಯ, ಸಂಸ್ಕೃತಿ ಜೀವನ ಚರಿತ್ರೆ, ಆತ್ಮವೃತ್ತ ಇವುಗಳನ್ನು ಕುರಿತು ಬರೆದ ಪ್ರೌಢ ಪ್ರಬಂಧಗಳು ಹಾಗೂ ವಿಶ್ಲೇಷಣಾತ್ಮಕ ವಿಮರ್ಶೆಗಳು.

ಮಾಸ್ತಿಯವರು ರಚಿಸಿದ ಸಾಹಿತ್ಯವು ಗುಣದಿಂದ ಹಾಗೂ ಗಾತ್ರದಿಂದ ಬಹು ದೊಡ್ಡದು. ಅವರು ಬಾಳಿದ ಬದುಕೂ ಘನವಾದುದು. ಈ ಕಾರಣದಿಂದ ಅವರು "ರಾಜಸೇವಾ ಪ್ರಸಕ್ತ" ಎಂಬ ಉನ್ನತ ಪ್ರಶಸ್ತಿಗೆ ಪಾತ್ರರಾದರು ಮತ್ತು ಬೆಳಗಾಂವಿಯಲ್ಲಿ ೧೯೨೯ರಲ್ಲಿ ಜರುಗಿದ ಕರ್ನಾಟಕ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಪದವನ್ನೂ ತಮ್ಮ ಮೂವತ್ತೆಂಟನೆಯ ಕಿರಿಯ ವಯಸ್ಸಿನಲ್ಲಿಯೆ ಅಲಂಕರಿಸಿದರು. ಕೊನೆಗೆ ಒಬ್ಬ ಸಾಹಿತಿಯ ಬದುಕಿಗೆ ಮುಕುಟವೆನಿಸುವ ಜ್ಞಾನಪೀಠ ಪ್ರಶಸ್ತಿಯೂ ಭಗವಂತನ ಕೃಪೆಯಿಂದ ಅವರಿಗೆ ಬಂದುದಾಯ್ತು. ಅವರಿಗೆ ಇನ್ನೇನು ಬೇಕಿತ್ತು ?

ಬ್ರಿಟಿಶ್ ಆಡಳಿತದ ಕಾಲಕ್ಕೆ ತುಂಡು ತುಂಡಾಗಿ ಚೆದರಿಹೋಗಿದ್ದ ಕನ್ನಡ ನಾಡಿನ ಏಕೀಕರಣ ಚಳವಳಿಗೆ ಬೆಂಬಲವಿತ್ತ ಮೈಸೂರು ಸಂಸ್ಥಾನದ ವಿದ್ವಾಂಸರಲ್ಲಿ ಮಾಸ್ತಿಯವರ ಪಾಲು ಹಿರಿದಾದುದು. ಧಾರವಾಡದ ಸಾಹಿತಿಗಳಿಗೆ ಏಕೀಕರಣ ದೊರೆಯುವ ಮೊದಲು ಕೂಡ ಮೈಸೂರ ಜನ ತಮ್ಮಿಂದ ಭಿನ್ನ ಎಂದು ತಿಳಿದೇ ಇಲ್ಲ. ಒಂದು ಕಾಲಕ್ಕೆ ಕಾವೇರಿಯಿಂದ ಗೋದಾವರಿಯವರೆಗೆ ಬಿತ್ತರಿಸಿದ್ದ ನಮ್ಮ ಈ ನಾಡು ಈಗ ಛಿದ್ರ ವಿಚ್ಛಿದ್ರವಾಗಿದ್ದ ನೋವು ಉತ್ತರ ಕರ್ನಾಟಕದ ಕನ್ನಡಿಗರಲ್ಲಿ ವಿಶೇಷವಾಗಿತ್ತೆಂಬುದರ ಅರಿವು ಮಾಸ್ತಿಯವರಿಗಿತ್ತು. ಮರಾಠಿಗರ ದಾಳಿಯಿಂದ ಉತ್ತರ ಕರ್ನಾಟಕದ ಜನ ತತ್ತರಿಸಿದ್ದಾಗ ಧೀರ ಕನ್ನಡಿಗರಾಗಿದ್ದ ಆರ್.ಎಚ್. ದೇಶಪಾಂಡೆಯವರ ಪ್ರಯತ್ನದಿಂದ ಧಾರವಾಡದಲ್ಲಿ ೧೮೯೦ರಲ್ಲೇ ಕರ್ನಾಟಕ ವಿದ್ಯಾವರ್ಧಕ ಸಂಘ ಸ್ಥಾಪಿತವಾಗಿತ್ತು. ಈ ಭಾಗದಲ್ಲಿ ಕನ್ನಡ ಬದುಕಿ ಉಳಿಯಲೆಂಬ ಉದ್ದೇಶದಿಂದ ಈ ಸಂಘವು ಕಾರ್ಯನಿರ್ವಹಿಸುತ್ತ ಬಂದಿತ್ತು. ಆಲೂರು ವೆಂಕಟರಾಯರ "ಕರ್ನಾಟಕ ಗತವೈಭವ" (೧೯೧೭) ಗ್ರಂಥದ ಸ್ಫೂರ್ತಿಯಿಂದ ಅವರು ಹೂಡಿದ್ದ ಕರ್ನಾಟಕ ಏಕೀಕರಣದ ಚಳವಳಿಗೆ ಬಲ ಬಂದಿತ್ತು. ಧಾರವಾಡವು ಜಾಗೃತವಾಗಿತ್ತು, ಉತ್ತರ ಕರ್ನಾಟಕದ ಗಂಡು ಮೆಟ್ಟಿನ ಸ್ಥಳ ಎನಿಸಿತ್ತು. ಧಾರವಾಡದ ಸಾಂಸ್ಕೃತಿಕ, ಸಾಹಿತ್ಯಕ, ರಾಜಕೀಯ ಆಂದೋಲನದ ಅಲೆಗಳು ಉತ್ತರ ಕರ್ನಾಟಕದಲ್ಲೆಲ್ಲಾ ಹರಡಿ ಗಡಿನಾಡುಗಳಾಚೆಗೂ ತಟ್ಟುತ್ತಿದ್ದವು. ಮೈಸೂರು-ಬೆಂಗಳೂರುಗಳಿಂದ, ಅಂದಿನ ಮದ್ರಾಸ್ ಇಲಾಖೆ ಹಾಗೂ ಹೈದರಾಬಾದು ಪ್ರದೇಶಗಳಿಂದ ಕನ್ನಡ ಸಾಹಿತಿಗಳ, ಕಲಾವಿದರ ಹಾಗೂ ಇತರ ವಿದ್ವಾಂಸರ ಗಮನ ಸ್ವಾಭಾವಿಕವಾಗಿ ಧಾರವಾಡದತ್ತ ಹರಿಯುತ್ತಿತ್ತು. ೧೯೧೧ರಲ್ಲೇ ಬಿ.ಎಂ.ಶ್ರೀ.ಯವರು ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ "ಕನ್ನ ನುಡಿ ತಲೆ ಎತ್ತುವ ಬಗೆ"ಯನ್ನು ಕುರಿತು ಭಾಷಣವಿತ್ತುದು ಕನ್ನಡ ಭಾವೈಕ್ಯದ ದಾರಿಯಲ್ಲಿ ಒಂದು ಮಹತ್ವದ ಮೈಲುಗಲ್ಲಾಗಿತ್ತು..

ಬಿ.ಎಂ.ಶ್ರೀಯವರ ತರುವಾಯದಲ್ಲಿ ಧಾರವಾಡಕ್ಕೆ ಅತಿ ಹತ್ತಿರದ ನಂಟು ಬೆಳೆದುದು ಮಾಸ್ತಿಯವರದು. ಅವರು ಉತ್ತರ ಕರ್ನಾಟಕದ ಕನ್ನಡದ ಸಮಸ್ಯೆಗಳನ್ನು ಆಳವಾಗಿ ಅರಿತವರಾಗಿದ್ದರು. ಆಲೂರು ವೆಂಕಟರಾಯರ "ಜಯ ಕರ್ನಾಟಕ" ಹಾಗೂ ಕರ್ನಾಟಕ ವಿದ್ಯಾವರ್ಧಕ ಸಂಘದ ವಾಗ್ಭೂಷಣ" ಪತ್ರಿಕೆಗಳೊಂದಿಗೆ "ಕರ್ನಾಟಕ ಪತ್ರ", "ಕರ್ನಾಟಕ ವೃತ್ತ", "ಕನ್ನಡಕೇ ಸರಿ", ಕರ್ನಾಟಕ ವೈಭವ", "ಕನ್ನಡಿಗ", "ಸಂಯುಕ್ತ ಕರ್ನಾಟಕ",

"ಕರ್ಮವೀರ" ಮುಂತಾದ ಪತ್ರಿಕೆಗಳು ದೇಶದ ರಾಜಕೀಯ ಪ್ರಸಾರದೊಂದಿಗೆ ಕನ್ನಡದ ಕಹಳೆಯನ್ನು ಮೊಳಗಿಸುತ್ತಿದ್ದವು. ಅಂದಿನ ನವೋದಯ ಕಾವ್ಯದ ಅಧ್ವರ್ಯುವಾಗಿದ್ದ "ಅಂಬಿಕಾತನಯದತ್ತ" ಎಂದು ಪ್ರಖ್ಯಾತರಾಗಿದ್ದ ದ.ರಾ. ಬೇಂದ್ರೆಯವರ ಹಾಗೂ ಅವರ ಗೆಳೆಯರ ಗುಂಪಿನ ಕವಿಗಳ ಹೊಸ ಬಗೆಯ ಕಾವ್ಯ ವೈಖರಿಯೂ ಜನಮನಗಳನ್ನು ಕುಣಿಸುತ್ತಿತ್ತು. ಇವೆಲ್ಲದರಿಂದ ಉಂಟಾಗಿದ್ದ ಜನಜಾಗೃತಿಯನ್ನು ಮಾಸ್ತಿಯವರು ಅರ್ಥ ಮಾಡಿಕೊಂಡಿದ್ದರು.

ಮಾಸ್ತಿಯವರು ಧಾರವಾಡಕ್ಕೆ ಮೊಟ್ಟ ಮೊದಲು ನಗೆ ಭೇಟ್ಟಿಯಿತ್ತುದು ೧೯೨೭ರಲ್ಲಿ. ಈ ಸಂದರ್ಭದ ಹಿನ್ನೆಲೆಯನ್ನು ಮಾಸ್ತಿಯವರೇ ತಮ್ಮ ಆತ್ಮವೃತ್ತವಾದ "ಭಾವ" (ಭಾಗ ೩, ಪು೧ ೨೮೨) ಗ್ರಂಥದಲ್ಲಿ ವಿವರಿಸಿದ್ದಾರೆ. ಅದರ ಸಾರಸಂಗ್ರಹವಿಷ್ಟೆ. ಆಲೂರು ವೆಂಕಟರಾಯರ "ಜಯ ಕರ್ನಾಟಕ" ಪತ್ರಿಕೆಯ ಪ್ರಚಾರಕ್ಕೆಂದು ಕವಿ ಸಾಲಿ ರಾಮಚಂದ್ರರಾಯರು ಬೆಂಗಳೂರಿಗೆ ಹೋಗಿ ಮೊದಲು ಕಂಡದ್ದು ಮಾಸ್ತಿಯವರನ್ನು. ಆಗ ಅವರು ಒಂದು ತಿಂಗಳ ಕಾಲ ಮಾಸ್ತಿಯವರೊಂದಿಗಿದ್ದರು. "ಜಯ ಕರ್ನಾಟಕ" ಪತ್ರಿಕೆಯ ಪ್ರಚಾರ ಕಾರ್ಯದಲ್ಲಿ ಮಾಸ್ತಿಯವರು ಅವರಿಗೆ ವಿಶೇಷ ಸಹಾಯವಿತ್ತರು. ಅದೇ ಸುಮಾರಿಗೆ ಧಾರವಾಡದ ಕರ್ನಾಟಕ ಕಾಲೇಜಿನ ಕರ್ನಾಟಕ ಸಂಘದ ಕಾರ್ಯದರ್ಶಿಗಳಾಗಿದ್ದ ರಂ.ಶ್ರೀ. ಮುಗಳಿಯವರಿಂದ ಕರ್ನಾಟಕ ಸಂಘದ ವಾರ್ಷಿಕೋತ್ಸವಕ್ಕೆ ಆಮಂತ್ರಣ ಬಂದುದರಿಂದ ಮಾಸ್ತಿಯವರು ಸಾಲಿರಾಮಚಂದ್ರ ರಾಯರೊಂದಿಗೆ ಧಾರವಾಡಕ್ಕೆ ತೆರಳಿದರು. ಧಾರವಾಡದಲ್ಲಿ ಸಾಲಿಯವರೊಂದಿಗೆ ಮಾಸ್ತಿಯವರು ರೈಲಿನಿಂದ ಇಳಿದಾಗ ಕರ್ನಾಟಕ ಕಾಲೇಜಿನ ಕರ್ನಾಟಕ ಸಂಘದ ಪ್ರತಿನಿಧಿಗಳೊಂದಿಗೆ ಬೇರೆ ಬೇರೆ ಸಂಘ-ಸಂಸ್ಥೆಗಳ ಪ್ರಮುಖರೂ ಅವರನ್ನು ಸ್ವಾಗತಿಸಲು ಸ್ಟೇಶನ್ನಿಗೆ ಬಂದಿದ್ದರು. ಒಬ್ಬೊಬ್ಬರೂ ತಾವು ಇಂಥಿಂಥ ಸಂಸ್ಥೆಯವರು ಎಂದು ಪರಿಚಯಿಸಿಕೊಂಡು ಮಾಸ್ತಿಯವರಿಗೆ ಹಾರ-ತುರಾಯಿಗಳನ್ನು ಅರ್ಪಿಸಿದರು. ಆಮಂತ್ರಿತ ರೊಬ್ಬರನ್ನು ಹೀಗೆ ಸ್ವಾಗತಿಸುವ ಕ್ರಮ ಮಾಸ್ತಿಯವರಿಗೆ ಹೊಸ ಅನುಭವವೆನಿಸಿತು. ಈ ಕ್ರಮ ಅಷ್ಟೇ ಅಲ್ಲ, ಒಂದೇ ಬಾರಿ ಇಷ್ಟು ಹಾರಗಳನ್ನು ಹಾಕಿಸಿಕೊಂಡುದೂ ಇದು ಮೊದಲ ಸಲವಾಗಿತ್ತು. ದೈವಭಕ್ತರಾಗಿದ್ದ ಮಾಸ್ತಿಯವರು ಮೊದಲ ಹಾರವನ್ನು ಹಾಕಿದಾಗ ಅದನ್ನು ವಾಡಿಕೆಯಂತೆ ಸ್ವೀಕರಿಸಿ, ಬೇರೆ ಸಂಘ ಸಂಸ್ಥೆಗಳ ಪರವಾಗಿ ಬಂದಿದ್ದ ಹಿರಿಯರು ಒಬ್ಬೊಬ್ಬರಾಗಿ ಹಾರ ಹಾಕಲು ಬಳಿಗೆ ಬಂದಾಗ ಇಷ್ಟು ಮರ್ಯಾದೆ ತಮಗೆ ಸಲ್ಲದೆಂದುಕೊಂಡು ತಮ್ಮ ಪಕ್ಕದಲ್ಲಿ ಒಂದು ಪೀಠದ ಮೇಲೆ ತಮ್ಮ ದೈವ ನಿಂತಿರುವಂತೆ ನೆನೆದು ತಮಗೆ ಹಾಕಲು ತಂದಿದ್ದ ಹಾರಗಳನ್ನೆಲ್ಲ ಮನಸಾ ಅವರ ಪಾದಕ್ಕೆ ಅರ್ಪಿಸಿದ್ದಾಗಿ ತಿಳಿಸಿದ್ದಾರೆ. ಕರ್ನಾಟಕ ಕಾಲೇಜಿನ ಕರ್ನಾಟಕ ಸಂಘದ ವಾರ್ಷಿಕೋತ್ಸವವು ವಿಜೃಂಭಣೆಯಿಂದ ನಡೆಯಿತು. ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಆಂಗ್ಲ ಮಹನೀಯರು ಸಭೆಯ ಅಧ್ಯಕ್ಷರಾಗಿದ್ದರು. ಕನ್ನಡ ವಿದ್ಯಾರ್ಥಿ-ಪ್ರಾಧ್ಯಾಪಕರಲ್ಲದೆ ಬೇರೆ ಭಾಷೆಯ ವಿದ್ಯಾರ್ಥಿ-ಪ್ರಾಧ್ಯಾಪಕರೂ ಸಭೆಯಲ್ಲಿದ್ದರು. ತಮ್ಮ ಮಾತು ಪ್ರಿನ್ಸಿಪಾಲರಿಗೂ ಎಲ್ಲ ವಿದ್ಯಾರ್ಥಿ ಪ್ರಾಧ್ಯಾಪಕರಿಗೂ ತಿಳಿಯುವಂತಿರಬೇಕು. ಆದರೆ

ಕರ್ನಾಟಕದ ಸಂಘದ ಪರ ತಮ್ಮ ಭಾಷಣವಿದ್ದುದರಿಂದ ಕನ್ನಡದಲ್ಲಿ ಕೆಲವು ವಾಕ್ಯಗಳಿಂದ ಆರಂಭಿಸಿ, ಇಂಗ್ಲಿಷ್ ಭಾಷೆಯಲ್ಲಿಯೇ ಅಂದಿನ ಭಾಷಣವನ್ನು ಮುಗಿಸಿದರು.

ಕರ್ನಾಟಕ ಸಂಘದ ಕಾರ್ಯಕ್ರಮ ಮುಗಿದ ಮೇಲೆ ಧಾರವಾಡದ ಇತಿಹಾಸ ಸಂಶೋಧನ ಮಂಡಲ, ಶಾಂತೇಶ ವಾಚನಾಲಯ, ರಾಷ್ಟ್ರೀಯ ವಿದ್ಯಾಲಯ ಮುಂತಾದ ವಿವಿಧ ಸಂಸ್ಥೆಗಳ ಪ್ರವರ್ತಕರ ಅಪೇಕ್ಷೆಯಂತೆ ಮರುದಿನ ಆ ಸಂಸ್ಥೆಗಳಿಗೆ ಹೋಗಿ ಚಿಕ್ಕ ಚಿಕ್ಕ ಭಾಷಣಗಳನ್ನಿತ್ತರು. ಮಾರನೆಯ ದಿನ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಕರ್ನಾಟಕ ಏಕೀಕರಣ ಬಗ್ಗೆ ಅವರ ಭಾಷಣವಾಯ್ತು. ಈ ವಿಷಯ ಕುರಿತು ಕ್ರಮವಾಗಿ ಒಂದು ಭಾಷಣ ಮಾಡಿದ್ದು ಇದೇ ಮೊದಲ ಬಾರಿ ಎಂದು ಮಾಸ್ತಿಯವರು ತಿಳಿಸಿದ್ದಾರೆ. ಅಂದು ಅವರು ನುಡಿದ ಮಾತಿನ ಸಾರವಿಷ್ಟು : "ಕನ್ನಡಿಗರಾದ ನಾವೆಲ್ಲರೂ ಬಯಸುಬಹುದಾದ ಏಕೀಕರಣ ಜನಜೀವನದ ಏಕೀಕರಣ, ಸಾಹಿತ್ಯದ ಏಕೀಕರಣ, ನಾವೆಲ್ಲ ಒಂದು ಭಾಷೆಯ ಮಕ್ಕಳು. ನಮ್ಮ ಮನೆಯ ದೇವರು ಒಂದೇ. ಹರಿಹರದ ಜನ ಮೈಸೂರಿಗೆ ಕಂದಾಯ ಕೊಟ್ಟು ರಾಣೇಬೆನ್ನೂರವರು ಮುಂಬಯಿ ಪ್ರಾಂತಕ್ಕೆ ಕಂದಾಯ ಕೊಟ್ಟ ಮಾತ್ರದಿಂದ ಅವರು ಒಂದು ಮನೆಯ ಮಕ್ಕಳೆಂಬ ಸಂಬಂಧಕ್ಕೆ ಧಕ್ಕೆ ಬಾರದು ಎಂದು ಹೇಳಿ ತಮ್ಮ ಭಾಷಣ ಮುಗಿಸಿದರು. ಅಧ್ಯಕ್ಷರಾಗಿದ್ದ ಆಲೂರು ವೆಂಕಟರಾಯರು ಮಾಸ್ತಿಯವರ ಅಭಿಪ್ರಾಯವನ್ನು ಮನಸಾ ಒಪ್ಪಿ, ಆಡಳಿತ ಬೇರೆಯಾದ ಮಾತ್ರಕ್ಕೆ ಸಂಬಂಧ ಅಳಿಯದು. ಇದು ನಮ್ಮ ಜನ ಮುಖ್ಯವಾಗಿ ತಿಳಿಯಬೇಕಾದ ಸಂಗತಿ ಎಂದು ಒತ್ತಿ ಹೇಳಿ ಮಾಸ್ತಿಯವರು ತಾವು ಪ್ರತಿಪಾದಿಸಿದ ವಿಷಯವನ್ನು ಕನ್ನಡ ನಾಡಿನ ಎಲ್ಲ ಕಡೆಗಳಲ್ಲೂ ಪ್ರಚಾರ ಮಾಡಬೇಕಾಗಿ ಬಿನ್ನವಿಸಿದರು. (ಭಾವ ೨, ಪುಟ ೨೮೨-೮೬).

ಈ ಸಲ ಮಾಸ್ತಿಯವರು ಧಾರವಾಡಕ್ಕೆ ಬಂದಾಗ ಸಾಲಿಯವರಲ್ಲಿ ವಾಸ್ತವ್ಯ ಹೂಡಿದ್ದರು. ಆಗ ಅವರು ಧಾರವಾಡದ ಗೆಳೆಯರ ಗುಂಪಿನ ಸಾಹಿತಿಗಳೆಲ್ಲರ ಪರಿಚಯ ಮಾಡಿಕೊಂಡರು. ಸಾಲಿಯವರ ಮನೆಯಲ್ಲಿ ಅವರೆಲ್ಲರೊಂದಿಗೆ ಒಂದು ಹೊತ್ತು ಕುಳಿತು ಸಲ್ಲಾಪ ನಡೆಸಿದರು. ಆಗ ಗೆಳೆಯರ ಗುಂಪಿನ ಬೇಂದ್ರೆಯವರು, ಬೆಟಗೇರಿ ಕೃಷ್ಣಶರ್ಮರು, ಹಲಸಂಗಿ ಚೆನ್ನಮಲ್ಲಪ್ಪನವರು ಮತ್ತಿತರ ಗೆಳೆಯರು ತಂತಮ್ಮ ಕೃತಿಗಳಲ್ಲಿ ಒಂದೆರಡು ಪದ್ಯಗಳನ್ನೋ ಲೇಖನಗಳನ್ನೋ ಓದಿ ತೋರಿಸಿದರು. ಮಾಸ್ತಿಯವರು ಅಂದು ಕೇಳಿದ್ದ ಕೃತಿಗಳಲ್ಲಿ ಬೇದ್ರೆಯವರ "ಕರುಳಿನ ವಚನ", ಬೆಟಗೇರಿಯವರ "ಮುದ್ದನ ಮಾತು"ಗಳನ್ನು ತುಂಬ ಮೆಚ್ಚಿಕೊಂಡರು. (ಭಾವ ೨, ಪುಟ ೨೮೭).

೧೯೨೯ರಲ್ಲಿ ಮಾಸ್ತಿಯವರು ಧಾರವಾಡಕ್ಕೆ ಬಂದಾಗ ನಾನೂ ಧಾರವಾಡಕ್ಕೆ ವಿದ್ಯಾಭ್ಯಾಸಕ್ಕೆಂದು ಬಂದು ಆಲೂರು ವೆಂಕಟರಾಯರ ಮನೆಯಲ್ಲಿದ್ದೆ. ಆಗ ಬೇಂದ್ರೆಯವರೂ ಆಲೂರು ವೆಂಕಟರಾಯರ ಮನೆಯ ಹತ್ತಿರದಲ್ಲೇ ವಾಸವಾಗಿದ್ದರು. ಅವರ ಕಡೆಗೆ ಬಂದಾಗಲೆಲ್ಲ ಮಾಸ್ತಿಯವರು ಆಲೂರು ವೆಂಕಟರಾಯರ ಭೆಟ್ಟಿಗೆ

ಬರುತ್ತಿದ್ದರು. ಈ ಸಂದರ್ಭದಲ್ಲಿ ಬೇಂದ್ರೆಯವರ ಹಾಗೂ ಆಲೂರು ವೆಂಕಟರಾಯರ ಮುಖಾಂತರ ಮಾಸ್ತಿಯವರ ಪರಿಚಯ ನನಗೂ ಹೆಚ್ಚು ನಿಕಟವಾಯ್ತು.

೧೯೨೯ರಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವು ಬೆಳಗಾಂವಿಯಲ್ಲಿ ಮಾಸ್ತಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಮ್ಮೇಳನದಲ್ಲಿ ಜರುಗಿದ ಕವಿಗೋಷ್ಠಿಗೆ ಬಿ.ಎಂ.ಶ್ರೀಯವರು ಅಧ್ಯಕ್ಷರಾಗಿದ್ದರು. ಹಲವಾರು ಕವಿಗಳ ಕವಿತಾ ವಾಚನ ನಡೆಯಿತು. ಆಗ ಸಭಿಕರ ಮೇಲೆ ಬಹು ಪ್ರಭಾವ ಬೀರಿದ ಕೃತಿ ಎಂದರೆ ಬೇಂದ್ರೆಯವರದೆಂದು ಮಾಸ್ತಿಯವರು ಮೆಚ್ಚಿ ನುಡಿದಿದ್ದಾರೆ. ಅದೇ ರಚಿಸಿದ್ದ ಬೇಂದ್ರಯವರ "ಹಕ್ಕಿ ಹಾರುತಿದೆ ನೋಡಿದಿರಾ" ಮತ್ತು ಬೆಟಗೇರಿ ಕೃಷ್ಣಶರ್ಮರ "ಎನಿತು ಇನಿದು ಈ ಕನ್ನಡ ನುಡಿಯು" ಎಂಬ ಕವಿತೆಗಳು ಸಭೆಗೆ ಬಹು ಪ್ರಿಯವೆನಿಸಿದ್ದನ್ನು ಉಲ್ಲೇಖಿಸಿದ್ದಾರೆ. (ಭಾವ ೨, ಪುಟ ೩೧೯).

ಬೆಳಗಾಂವಿಯಿಂದ ಮಾಸ್ತಿಯವರು, ಬಿ.ಎಂ.ಶ್ರೀಯವರು ಮತ್ತು ಎಂ.ಎಚ್. ಕೃಷ್ಣ ಅವರು ಧಾರವಾಡಕ್ಕ ಬಂದು ಅಲ್ಲಿ ಒಂದು ಸಭೆಯಲ್ಲಿ ಮಾನಾಡಿ ರಾತ್ರಿ ಬೆಂಗಳೂರಿಗೆ ರೈಲು ಏರುವುದೆಂದು ಏರ್ಪಾಡಾಗಿತ್ತು. ಆದರೆ ಬೆಳಗಾಂವಿಯಿಂದ ಇವರನ್ನು ಕರೆತರುತ್ತಿದ್ದ ಕಾರು ದಾರಿಯಲ್ಲಿ ತೊಂದರೆ ಕೊಟ್ಟುದರಿಂದ ಅದನ್ನು ಸರಿಪಡಿಸಿಕೊಂಡು ಮುಂದೆ ಹೋಗುವುದರಲ್ಲಿ ಅವರ ಪ್ರಯಾಣ ಐದು ಗಂಟೆ ತಡವಾಯ್ತು. ಧಾರವಾಡದಲ್ಲಿ ಸಭೆ ನಡೆಯಬೇಕಾದದ್ದು ಐದೂವರೆ ಗಂಟೆಗೆ. ಇವರು ಧಾರವಾಡ ತಲುಪಿದ್ದು ರಾತ್ರಿ ಹತ್ತೂವರೆ ಗಂಟೆಗೆ ! ಗಂಟೆಗಟ್ಟಲೆ ಕಾದಿದ್ದು ಜನ ನಿರಾಶೆಯಿಂದ ಹೊರಟು ಹೋಗಿದ್ದರು. ಇವರು ಊರು ಮುಟ್ಟಿದೊಡನೆ ಧಾರವಾಡದ ಸ್ನೇಹಿತರು ನಾಲ್ಕು ಜನ ಹುಡುಗರ ಕೈಯಲ್ಲಿ ಜಾಗಟೆಗಳನ್ನು ಕೊಟ್ಟು ಊರಿನ ನಾಲ್ಕು ಭಾಗಗಳಲ್ಲಿ "ಉಪನ್ಯಾಸಕರು ಮೂವರು ಬಂದಿದ್ದಾರೆ, ಒಡನೆ ಸಭೆ ಸೇರುತ್ತದೆ ಎಲ್ಲರೂ ಬರಬೇಕು." ಎಂದು ಘೋಷಣೆ ಮಾಡಿಸಿದರು. ಇವರು ಮೂವರೂ ಊಟ ಮುಗಿಸಿ ಹೊರಗೆ ಬರುವ ವೇಳೆಗೆ ಸಭೆ ಮತ್ತೆ ನೆರೆದಿತ್ತು. ಮೂವರೂ ಮಾತನಾಡಿ ರಾತ್ರಿ ೧೨ ಗಂಟೆಗೆ ರೈಲಿಗೆ ಹೊರಟುದಾಗಿ ಮಾಸ್ತಿ ಸ್ವಾರಸ್ಯಕರವಾಗಿ ಬಣ್ಣಿಸಿದ್ದಾರೆ. (ಭಾವ ೨, ಪುಟ ೩೨೦). ಈ ಪ್ರಸಂಗದಿಂದ ಧಾರವಾಡದವರಿಗೂ ಮಾಸ್ತಿಯವರಿಗೂ ಉಂಟಾಗಿದ್ದ ನಂಟು ಎಂಥದೆಂಬುದು ವ್ಯಕ್ತವಾಗುತ್ತದೆ.

ಅನಂತರ ಮಾಸ್ತಿಯವರು ಅನೇಕ ಸಲ ಧಾರವಾಡಕ್ಕೆ ಬಂದು ಆಲೂರು ವೆಂಕಟರಾಯರಲ್ಲಿ, ಬೇಂದ್ರೆಯವರಲ್ಲಿ, ಸಾಲಿಯವರಲ್ಲಿ, ವಕೀಲರಾಗಿದ್ದ ಎನ್.ಕೆ. ದೀಕ್ಷಿತರಲ್ಲಿ, ನನ್ನ ಮನೆಯಲ್ಲಿ ವಾಸ್ತವ್ಯ ಹೂಡಿ ಸಭೆ-ಸಮ್ಮೇಳನನಗಳಲ್ಲಿ ಭಾಗವಹಿಸಿ ಹೋದುದುಂಟು. ಆಗ ನಡೆದ ಒಂದೆರಡು ಸಂದರ್ಭಗಳನ್ನು ಸೂಚಿಸಬಯಸುತ್ತೇನೆ.

೧೯೪೫ರಲ್ಲಿ ಬೇಂದ್ರೆಯವರ ೫೦ನೆಯ ಹುಟ್ಟುಹಬ್ಬ ವೈಭವದಿಂದ ಜರುಗಿತು. ಆಗ ಮಾಸ್ತಿಯವರೇ ಅಧ್ಯಕ್ಷತೆ ವಹಿಸಿದ್ದರು. ಆಗ ಅವರ ವಾಸ್ತವ್ಯ ಎನ್.ಕೆ. ದೀಕ್ಷಿತರ ಮನೆಯಲ್ಲಿ. ಬೇಂದ್ರೆಯವರ ಹುಟ್ಟುಹಬ್ಬದ ಈ ಉತ್ಸವವು ಧಾರವಾಡದ ಜನಕ್ಕೆ

ತುಂಬ ಮಹತ್ವದ್ದೆನಿಸಿತ್ತು. ಬೇಂದ್ರೆಯವರು ತಮ್ಮ ಮಾತಿನಲ್ಲಿ ತಮ್ಮ ಬಡತನದ ಜೀವನದಲ್ಲಿ ಮಾಸ್ತಿಯವರು ನೀಡುತ್ತ ಬಂದಿದ್ದ ಧನಸಹಾಯದ ಬಗ್ಗೆ ಕೃತಜ್ಞತೆ ವ್ಯಕ್ತಪಡಿಸುತ್ತ, "ಅಣ್ಣ ಮಾಸ್ತಿಯವರು ನನಗೆ ನೆರವಾಗಿ ನಿಂತರು. ನಾನು ನೆರವನ್ನು ತೆಗೆದುಕೊಂಡೆ. ಕೆಲವು ಜನ ನಾನು ಪರಾವಲಂಬಿಯಾದೆ ಎಂದು ನನ್ನನ್ನು ಹಳಿಯುತ್ತಾರೆ. ನಾನು ಪರಾವಲಂಬಿಯಾದೆ. ಒಪ್ಪುತ್ತೇನೆ. ಪರವಲಂಬಿಗಳಾಗದೆ ಇವರು ಬಾಳಿದಂತೆ ಬಾಳಲು ನನ್ನಿಂದ ಆಗಲಿಲ್ಲ. ಇದು ನನ್ನ ದೈವ" ಎಂದರು. ಈ ಮಾತನ್ನು ಕೇಳಿ ಮಾಸ್ತಿಯವರು ತಂಬ ನೊಂದುಕೊಂಡರು. ಅಧ್ಯಕ್ಷತೆಯ ಮಾತನ್ನಾಡುವಾಗ–"ನನ್ನ ಸೋದರ ಬೇದ್ರಯವರು ತಮ್ಮ ದೃಷ್ಟಿಯಿಂದ ಯಾವುದನ್ನು ನೆರವು ಎನ್ನುತ್ತಾರೆ ಅದು ನನ್ನ ದೃಷ್ಟಿಯಿಂದ ನಾನು ಕಾವ್ಯಕ್ಕೆ ಒಪ್ಪಿಸಿದ ಕಾಣಿಕೆ. ಪರಾವಲಂಬನ ಎಂಬ ಶಬ್ದ ಈ ಸಂದರ್ಭಕ್ಕೆ ಹೊಂದುವುದೇ ಇಲ್ಲ. ಕಾಸುಳ್ಳವನಿಂದ ಕವಿ ಕಾಸು ತೆಗೆದುಕೊಳ್ಳುವುದು ಪರಾವಲಂಬನವಾದರೆ ಎಲ್ಲ ಕವಿಗಳೂ ಎಲ್ಲ ಕಾಲದಲ್ಲೂ ಪರಾವಲಂಬಿಗಳೇ. ಎಂದರೇನು ? ಪರಾವಲಂಬಿ ಎನ್ನುವುದು ಒಂದು ಕಡಮೆಯ ಸ್ಥಿತಿ ಎಂಬ ಭಾವನೆಯದು. ಆದರೆ ಪರಾವಲಂಬಿ ಶಬ್ದಕ್ಕೆ ಇದಕ್ಕಿಂತ ಒಳ್ಳೆಯದಾದ ಇನ್ನೊಂದು ಅರ್ಥವಿದೆ. ನಾವೆಲ್ಲರೂ ಪರಾವಲಂಬಿಗಳು. ಪರ ನಮ್ಮನ್ನೆಲ್ಲಾ ನೋಡಿಕೊಳ್ಳುತ್ತದೆ. ನಾನು ಅದನ್ನು ಅವಲಂಬಿಸಿದ್ದೇನೆ. ಮನುಷ್ಯನಿಗೆ ಪರಾವಲಂಬನ ಒಂದು ಭಾಗ್ಯ. ತಾನು ಪರಾವಲಂಬಿ ಎನ್ನುವುದನ್ನು ತಿಳಿದು ಮರೆಯದೆ ನಡೆಯುವ ಮನುಷ್ಯ ಉದ್ಧಾರ ಆಗಬಹುದು. ನನ್ನ ಸೋದರರು ನನ್ನನ್ನು ಅವಲಂಬಿಸಲಿಲ್ಲ. ಅವರು ನಾನೂ ಎಲ್ಲರೂ ಪರನನ್ನು ಅವಲಂಬಿಸಿ ಬದುಕುತ್ತಿದ್ದೇವೆ" ಎಂದರು. ಸಭೆಗೆ ಮಾಸ್ತಿಯವರ ಮಾತು ತುಂಬ ಹಿಡಿಸಿತು. ಅಷ್ಟೇ ಅಲ್ಲ, ಅವರು ಎಷ್ಟು ದೊಡ್ಡವರೆಂಬುದು ಸಭಿಕರ ಹೃದಯ ತಟ್ಟಿತು.

೧೯೪೯ರಲ್ಲಿ ಕರ್ನಾಟಕ ಕಾಲೇಜಿನ ಕರ್ನಾಟಕ ಸಂಘದ ಅಧ್ಯಕ್ಷನಾಗಿ ನಾನು ಕಾರ್ಯನಿರ್ವಹಿಸುತ್ತಿದ್ದೆ. ಆಗ ಮಾಸ್ತಿಯವರನ್ನು ಸಂಘದ ವಾರ್ಷಿಕೋತ್ಸವಕ್ಕೆ ಆಮಂತ್ರಿಸಿದ್ದೆ. ಆಗ ಅವರ ವಾಸ್ತವ್ಯ ನಮ್ಮ ಮನೆಯಲ್ಲಿಯೆ. ಕರ್ನಾಟಕ ಸಂಘದ ವಾರ್ಷಿಕೋತ್ಸವದ ಕಾರ್ಯ ಸಾಂಗವಾಗಿ ಜರುಗಿತು. ಮರುದಿನ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಹಾಗೂ ಇತರ ಒಂದೆರಡು ಸಂಸ್ಥೆಗಳಲ್ಲಿ ಮಾತನಾಡಿ ಮನೆಗೆ ಬಂದರು. ಈ ಸಭೆಗಳ ಕಾರ್ಯ ಕಲಾಪಗಳಲ್ಲಿ ಅವರಿಗೆ ಆಯಾಸ ಹೆಚ್ಚಾಗಿರಬೇಕು. ಇದರಿಂದ ಅವರು ಜ್ವರ ಬಾಧೆಯಿಂದ ನಮ್ಮ ಮನೆಯಲ್ಲಿ ಹಾಸಿಗೆ ಹಿಡಿದರು. ಉತ್ತಮ ಡಾಕ್ಟರರಿಂದ ಔಷಧೋಪಚಾರ ನಡೆಸಿ ನಾನು, ನನ್ನ ಹೆಂಡತಿ, ನನ್ನ ತಮ್ಮ ಪಾಂಡುರಂಗ ಮೂವರೂ ಅವರ ಆರೈಕೆಗೆ ತೊಡಗಿದವು. ಒಂದೆರಡು ದಿನಗಳಲ್ಲಿ ಜ್ವರ ಕಡಮೆಯಾಗಲಿಲ್ಲ. ಹೆಚ್ಚು ನರಳುತ್ತಿದ್ದರು. ಕೂಡಲೆ ಬೆಂಗಳೂರಿಗೆ ಅವರ ಮನೆಗೆ ಕಾಹಿಲೆಯ ವಿಷಯ ತಂತಿಯ ಮೂಲಕ ತಿಳಿಸಿದೆ. ಮರುದಿನವೇ ಮಾಸ್ತಿಯವರ ಶ್ರೀಮತಿ ಪಂಕಜಮ್ಮನವರು ತಮ್ಮ ಅಳಿಯಂದಿರೊಬ್ಬರೊಂದಿಗೆ ಧಾರವಾಡಕ್ಕೆ ಬಂದರು. ಶ್ರೀಮತಿ ಪಂಕಜಮ್ಮನವರು ನಮ್ಮ ಮನೆಯಲ್ಲಿ ೩, ೪

ದಿನವಿದ್ದು ಪತಿಯ ಶುಶ್ರೂಷೆಯನ್ನು ವಹಿಸಿಕೊಂಡರು. ನಾನೂ ನಮ್ಮ ಮನೆಯ ಎಲ್ಲರೂ ಅವರಿಗೆ ಸಹಾಯಕರಾಗಿ ನಿಂತೆವು. ಈ ನಾಲ್ಕಾರು ದಿನಗಳಲ್ಲಿ ಧಾರವಾಡದ ಸಾಹಿತಿಗಳನೇಕರು ಮಾಸ್ತಿಯವರನ್ನು ಕಂಡು ಔಷಧೋಪಚಾರ, ಶುಶ್ರೂಷೆ ಸರಿಯಾಗಿ ನಡೆದುದನ್ನು ತಿಳಿದುಕೊಂಡು ಹೋದರು. ಭಗವಂತನ ಅನುಗ್ರಹದಿಂದ ಮಾಸ್ತಿಯವರ ಕಾಹಿಲೆ ಗುಣವಾಯ್ತು. ಧಾರವಾಡದ ಆಕಾಶವಾಣಿಯಲ್ಲಿ ಕೆಲಸ ಮಾಡುತ್ತಿದ್ದ ಅವರ ಮಗಳು ಶ್ರೀಮತಿ ವಿಜಯವಲ್ಲಿಯವರ ಮನೆಯಲ್ಲಿ ಒಂದೆರಡು ದಿನವಿದ್ದರು. ನಮ್ಮ ಮನೆಯಿಂದ ಹೋಗುವಾಗ ನನ್ನ ಹೆಂಡತಿ ಮಾಡಿದ ಆರೈಕೆಯಿಂದ ತೃಪ್ತಿಗೊಂಡಿದ್ದ ಮಾಸ್ತಿಯವರು ಆಕೆಗೆ "ನೀನು ನನ್ನ ಎಂಟನೆಯ ಮಗಳಮ್ಮ" ಎಂದು ಆಶೀರ್ವದಿಸಿದರು. ಮಗಳ ಮನೆಯಲ್ಲಿ ವಿಷ್ಣು ಸಹಸ್ರನಾಮ-ಸತ್ಯನಾರಾಯಣ ಪೂಜೆಗಳನ್ನು ಸ್ವತಃ ನಡೆಸಿದರು. ಇದಕ್ಕೆ ನಮ್ಮನ್ನೆಲ್ಲ ಬರಹೇಳಿದ್ದರು. ಅವರು ಬೆಂಗಳೂರಿಗೆ ಹೋದ ಬಳಿಕ ಒಂದು ವಾರದಲ್ಲಿಯೆ ಶ್ರೀಮತಿ ಪಂಕಜಮ್ಮನವರಿಂದ ನನ್ನ ಹೆಂಡತಿಗೆ ಪಾರ್ಸಲ್ ಮೂಲಕ ಒಂದು ಉತ್ತಮ ರೇಶಿಮೆ ಸೀರೆ ಯುಗಾದಿಯ ಕಾಣಿಕೆಯಾಗಿ ಬಂದಿತು. ಅದರೊಂದಿಗೆ ಅರಿಸಿನ ಕುಂಕುಮ ಪ್ರಸಾದವೂ ಇತ್ತು. ಜೊತೆಗೆ ಶ್ರೀಮತಿ ಪಂಕಜಮ್ಮನವರ ಪತ್ರವೂ ಇತ್ತು. ಅದನ್ನು ನಾನಿಂದಿಗೂ ಕಾದಿರಿಸಿದ್ದೇನೆ. ಮಾಸ್ತಿ ಅಧ್ಯಯನ ಪೀಠದ ಸಭೆಯಲ್ಲಿ ಓದಿ ತೋರಿಸಿ ಅದರ ಜೆರಾಕ್ಸ್ ಪ್ರತಿಗಳನ್ನು ಸಭೆಗೆ ಬಂದಿದ್ದ ಮಾಸ್ತಿಯವರ ಹೆಣ್ಣುಮಕ್ಕಳಿಗೂ ಮೊಮ್ಮಗಳಾದ ಶ್ರೀಮತಿ ವಸಂತಶ್ರೀಗೂ ಕೊಟ್ಟು ಮಾಸ್ತಿ ದಂಪತಿಗಳ ಬಗ್ಗೆ ನನ್ನಲ್ಲಿದ್ದ ಭಾವನೆಗಳನ್ನು ಸಭೆಗೆ ನಿವೇದಿಸಿಕೊಂಡೆ.

(೧೪-೪-೨೦೦೧)



ಡಾ. ವಿಜಯಾ ಸುಬ್ಬರಾಜ್ ಅವರ 'ಸಾರ್ಥಕ ಬದುಕಿನ ಶತಾಯುಷಿ ಪ್ರೊ. ಸೇತುರಾಮ ರಾಘವೇಂದ್ರ ಮಳಗಿ' ಒಂದು ಅಪರೂಪದ ಕೃತಿ. ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಪ್ರೊ. ಮಳಗಿಯವರ ವಿದ್ಯಾರ್ಥಿನಿಯಾಗಿದ್ದ ಡಾ. ವಿಜಯಾ ಅವರು ತುಂಬ ಅಭಿಮಾನದಿಂದ, ಶ್ರಮವಹಿಸಿ ಅನೇಕ ಕಡೆಗಳಿಂದ ವಿವರಗಳನ್ನು ಸಂಗ್ರಹಿಸಿ ಈ ಕೃತಿಯನ್ನು ರಚಿಸಿದ್ದಾರೆ. ಪ್ರೊ. ಮಳಗಿಯವರು ಸಾಹಿತ್ಯ ರಚನೆಗಿಂತ ಹೆಚ್ಚಾಗಿ ಅಧ್ಯಾಪಕ ವೃತ್ತಿಯಲ್ಲಿ ಹಾಗೂ ಆ ಬಗೆಯ ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದ್ದರು ಹಾಗೂ ತಮ್ಮನ್ನು ವಿಶೇಷವಾಗಿ ತೊಡಗಿಸಿಕೊಂಡಿದ್ದರು ಎಂಬುದನ್ನು ಲೇಖಕರು ತುಂಬ ಸುಂದರವಾಗಿ ನಿರೂಪಿಸಿದ್ದಾರೆ.

**ಡಾ. ಪಿ.ವಿ. ನಾರಾಯಣ**
ಅಧ್ಯಕ್ಷರು
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ



**ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ**
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
3ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು-560019.
ದೂರವಾಣಿ : 26615877, 26676773
ಇಮೇಲ್ : bmsritrust@gmail.com